# ಚಂದಮಾಮ

ಸಂಸ್ಥಾಪಕರು : 'ಚಕ್ರಪಾಣಿ'
ಸಂಚಾಲಕರು : ನಾಗಿರೆಡ್ಡಿ

ಎಲ್ಲಾ ಜನರೂ ಒಂದೇ ರೀತಿಯಾಗಿರುವುದಿಲ್ಲ. ಊರೊಳಗಾಗಲೀ, ಶಾಲೆ, ಕಚೇರಿ ಕಾರ್ಯಾಲಯಗಳಲ್ಲಾಗಲೀ, ಒಂದೇ ಮನೆಯೊಳಗೇ ಇರುವವರಾಗಲೀ ರೂಪ, ಆಕಾರ, ಗುಣಗಳಲ್ಲಿ ಬೇರೆ ಬೇರೆಯಾಗಿಯೇ ಇರುತ್ತಾರೆ. ಅವರೊಳಗೆ ಒಬ್ಬಿಬ್ಬರು ಯಾವುದರಲ್ಲಾದರೂ ಹೆಚ್ಚಿನವರಾಗಿರಬಹುದು. ಅಂಥವರು ಉಳಿದವರನ್ನು ಕೀಳು ದೃಷ್ಟಿಯಿಂದ ನೋಡಿದರೆ ಕಡೆಗೆ ಪಶ್ಚಾತ್ತಾಪಕ್ಕೆ ಕಾರಣವಾದೀತು. ಈ ಸಂಚಿಕೆಯ "ವಿಕಲಾಂಗರು" ಎಂಬ ಕಥೆಯನ್ನು ವಿಕಲಾಂಗರಿಗಷ್ಟೇ ಅಲ್ಲದೆ, ಮೇಲೆ ಹೇಳಿದ ವಿಷಯಗಳಿಗೂ ಹೊಂದಿಸಿಕೊಳ್ಳುವುದು ಒಳ್ಳೆಯದು.

## ಅಮರವಾಣಿ

ವಿದ್ಯಾನ ಶೋಭತೇ ಪುಂಸೋ ಯದಿ ನಸ್ಯಾತ್ ರಸಜ್ಞತಾ
ಲವಣೇನ ವಿನಾಶಾಕಾಃ ಸುಪಕ್ವಾ ಅಪಿ ನಿಷ್ಫಲಾಃ

ತರಕಾರಿಗಳನ್ನು ಎಷ್ಟು ಚೆನ್ನಾಗಿ ಅಡಿಗೆ ಮಾಡಿದರೂ ಉಪ್ಪು ಹಾಕದೆ ಹೋದರೆ ಅವು ಉಪಯೋಗವಾಗವು. ಹಾಗೆಯೇ ರಸಜ್ಞತೆ ಇಲ್ಲದ ವಿದ್ಯೆಯೂ ಶೋಭಿಸುವುದಿಲ್ಲ.

ಸಂಪುಟ: ೭೨ ಮೇ '೮೪ ಸಂಚಿಕೆ : ೫

ಬಿಡಿ ಪ್ರತಿ ರೂ. ೨-೦೦ :: ವಾರ್ಷಿಕ ಚಂದಾ ರೂ. ೨೪-೦೦




SANKAR

# ಚಂದಮಾಮನ ಹರಟೆ



## ದೂರವಾಗುವ ಚಂದ್ರ

ಭೂಮಿಯಿಂದ ಚಂದ್ರಗೋಳವು ಕ್ರಮಕ್ರಮವಾಗಿ ದೂರವಾಗುತ್ತಾ, ಶತಮಾನಕ್ಕೆ ಶತಮಾನದಲ್ಲಿ ಚಿಕ್ಕದಾಗುತ್ತಾ ಬರುತ್ತದೆ. ಚಂದ್ರನು ಹೀಗೆ ದೂರವಾಗುವುದರಿಂದ, ಮುಂದೆ ಮುಂದೆ ಸಂಪೂರ್ಣ ಸೂರ್ಯಗ್ರಹಣವಾಗುವುದು ಸಾಧ್ಯವಾಗದು. ಆದರೂ ಹಾಗೆ ನಡೆಯಲು ಇನ್ನೂ ಎಷ್ಟೋ ಲಕ್ಷ ವರ್ಷಗಳು ಆಗುತ್ತವೆ !



## ಗಡಿಗೆಯಲ್ಲಿ ಪ್ರಯಾಣ

ಸ್ಪೈಯಿನ್ ದೇಶಕ್ಕೆ ಸೇರಿದ ಇಬ್ಬರು ಯುವಕರು ಇತ್ತೀಚೆಗೆ, ಅಡಿಗೆ ಮಾಡುವ ದೊಡ್ಡದೊಂದು ಗಡಿಗೆಯನ್ನು ಸಂಪಾದಿಸಿ, ಅದರಲ್ಲಿ ಕುಳಿತು, ಈಬ್ರೋ ನದಿಯ ಮೇಲೆ ಇನ್ನೂರ ಮೂವತ್ತು ಕಿಲೋಮೀಟರ್ ದೂರ ಉಲ್ಲಾಸವಾಗಿ ಪ್ರಯಾಣ ಮಾಡಿದರು.



## ನೆಪೋಲಿಯನ್ ನೌಕೆಗಳು

೧೭೯೮ ನೇ ವರ್ಷದಲ್ಲಿ ನಡೆದ ನೈಲ್ ನದೀಯುದ್ಧದಲ್ಲಿ ಬ್ರಿಟಿಷ್ ನೌಕಾದಳ ನಾಯಕನಾದ ಅಡ್ಮಿರಲ್ ನೆಲ್ಸನ್, ಫ್ರೆಂಚ್ ಚಕ್ರವರ್ತಿ ನೆಪೋಲಿಯನ್ ಬೋನ ಪಾರ್ಟಿಗೆ ಸೇರಿದ ನಾಲ್ಕು ನೌಕೆಗಳನ್ನು ಮುಳುಗಿಸಿದನು. ಆ ನಾಲ್ಕು ನೌಕೆಗಳು ಇನ್ನೂ ಅಲೆಗ್ಸಾಂಡ್ರಿಯಾ ತೀರಕ್ಕೆ ೮ ಕಿ. ಮೀ. ದೂರದಲ್ಲಿ ನೀರಿನಡಿಯಲ್ಲಿ ಸ್ವಲ್ಪವೂ ಕೆಡದೆ ಇರುವುದಾಗಿ ಕಂಡು ಹಿಡಿಯಲ್ಪಟ್ಟಿವೆ. ಅವುಗಳನ್ನು ಮೇಲೆ ತೆಗೆಯುವ ಕೆಲಸವು ಇತ್ತೀಚೆಗಷ್ಟೇ ಪ್ರಾರಂಭವಾಗಿದೆ.

## ನಿಮಗೆ ಗೊತ್ತೇ?

೧. ಸಾಹಿತ್ಯಕ್ಕಾಗಿ ಮೊತ್ತಮೊದಲು ನೋಬೆಲ್ ಬಹುಮಾನ ಪಡೆದವರು ಯಾರು ?

೨. ಮೊತ್ತಮೊದಲು ಶಾಂತಿಗಾಗಿ ನೋಬೆಲ್ ಬಹುಮಾನ ಹೊಂದಿದವರಾರೆಂದು ನಿಮಗೆ ಗೊತ್ತೇ ?

೩. ಭೌತಿಕಶಾಸ್ತ್ರದಲ್ಲಿ ಮೊದಲನೇ ಸಾರಿ ನೋಬೆಲ್ ಬಹುಮಾನ ಯಾರಿಗೆ ಸಿಕ್ಕಿತು ?

೪. ರಸಾಯನಿಕ ಶಾಸ್ತ್ರದಲ್ಲಿ ಮೊತ್ತಮೊದಲು ನೋಬೆಲ್ ಬಹುಮಾನ ಯಾರಿಗೆ ಸಿಕ್ಕಿತು ?

೫. ವೈದ್ಯಶಾಸ್ತ್ರದಲ್ಲಿ ಮೊತ್ತಮೊದಲು ನೋಬೆಲ್ ಬಹುಮಾನವನ್ನು ಯಾರು ಹಿಡಿದರು ?

(ಉತ್ತರ ೬೪ ನೇ ಪುಟದಲ್ಲಿ)



# ವಿಕಲಾಂಗರು

ಒಂದು ಊರಿನಲ್ಲಿ ಒಂದು ಮನೆಯಲ್ಲಿದ್ದ ದಂಪತಿಗಳಿಗೆ ಗಂಡುಮಗುವೊಂದು ಹುಟ್ಟಿತು, ಸುಂದರವಾದ ಆ ಮಗುವಿಗೆ ಸುದೀಪನೆಂದು ಹೆಸರಿಟ್ಟರು. ಆ ಮಗು ಬಹಳ ಸುಂದರವಾಗಿದ್ದುದರಿಂದ ಊರವರೆಲ್ಲಾ ಆ ಮಗುವನ್ನು ನೋಡಿ ಅತ್ಯಂತ ಮುಚ್ಚಟೆ ಪಡುತ್ತಿದ್ದರು. ಸುದೀಪನು ಬೆಳೆದು ದೊಡ್ಡವನಾಗುತ್ತ ಬಂದಂತೆ ಇನ್ನಿಷ್ಟು ಅಂದಗಾರನಾಗುತ್ತಾ ಬಂದನು. ಹತ್ತಾರು ಮಂದಿ ತನ್ನ ಸೌಂದರ್ಯವನ್ನು ಮೆಚ್ಚಿ ಮಾತಾಡುವುದನ್ನು ಕೇಳಿ ಅವನಿಗೆ ಬಹಳ ಹೆಮ್ಮೆ ಬೆರೆತ ಸಂತೋಷವೆನಿಸುತ್ತಿತ್ತು.

ಅವನಿರುವ ಊರಿನಲ್ಲಿ ಒಬ್ಬ ಮೆಳ್ಳೆಗಣ್ಣಿನವಳೂ ವಕ್ರಮೂಗಿನ ಹುಡುಗನೂ, ಸೊಟ್ಟ ಕೈಗಳ ಭಿಕ್ಷುಕನೂ, ಕುಂಟತಾತನೊಬ್ಬನೂ ಇದ್ದರು. ಈ ವಿಕಲಾಂಗರನ್ನು ಕಂಡಾಗಲೆಲ್ಲಾ ಸುದೀಪನು ಏನೋ ಒಂದು ಗೇಲಿಯ ಮುಳ್ಳು ಮಾತುಗಳಿಂದ ಅವರುಗಳನ್ನು ಚುಚ್ಚುತ್ತಿದ್ದನು. ಕೆಲವುಸಾರಿ ಬೇಕೆಂತ ಅವಹೇಳನೆ ಮಾಡಲಿಕ್ಕಾಗಿಯೇ ಅವರ ಮುಂದೆ ಅವನು ಬರುತ್ತಿದ್ದನು.

ಸುದೀಪನ ತಾಯಿ ಮಗನ ಆ ಬಗೆಯ ಪುಂಡುತನಕ್ಕೆ ಬಹಳವಾಗಿ ನೊಂದುಕೊಳ್ಳುವಳು. ಮಗನಿಗೆ ನೀತಿಯ ಮಾತುಗಳನ್ನು ಹೇಳುವಳು. "ಅಪ್ಪಾ, ಯಾವ ಮನುಷ್ಯರಾದರೂ ವಿಕಲಾಂಗರಾಗಿದ್ದರೆ, ಅಂಥವರಿಗೆ ನಾವು ಕೈಲಾದರೆ ಸಹಾಯ ಮಾಡಬೇಕೇ ಹೊರತು ಗೇಲಿಮಾಡಲೇ ಬಾರದು. ಅದು ಮಹಾಪಾಪ! ಅದು ಅವರ ತಪ್ಪೂ ಅಲ್ಲ" ಎನ್ನುವಳು. ಆದರೆ ಸುದೀಪನಿಗೆ ಆ ಮಾತುಗಳು ಕಿವಿಗೆ ಅಂಟುತ್ತಿದ್ದಿಲ್ಲ.

ಒಂದು ದಿನ ಆ ನಾಲ್ವರು ವಿಕಲಾಂಗರೂ ಒಂದೇ ಕಡೆಯಲ್ಲಿದ್ದಾಗ ಸುದೀಪನು ಅವರನ್ನು ಎಷ್ಟು ಅವಹೇಳನೆ ಮಾಡಿದನೆಂದರೆ, ಅವರೆಲ್ಲ ಸಹನೆ ಮೀರಿ ಒಟ್ಟಾಗಿ ಅವನನ್ನು ಹೊಡೆಯಲಿಕ್ಕೇ ಬಂದರು. ಸುದೀಪನು ಕೇಕೇ ಹಾಕಿ ನಗುತ್ತ, ಅಣಕಿಸುತ್ತ ಅವರಿಗೆ ಸಿಗುವ ಹಾಗೆ ಆಟ ತೋರಿಸಿ ತಪ್ಪಿಸಿಕೊಂಡು ಓಡಿಹೋದನು.

ಅವನು ಓಡಿಹೋಗುವಾಗ ವಿಕಲಾಂಗರು ನಾಲ್ವರೂ ಏಕಕಂಠದಿಂದ, "ನಾವು ನಿನಗೇನು ಅನ್ಯಾಯ ಮಾಡಿದ್ದೇವೆ? ಸುಮ್ಮಸುಮ್ಮನೆ



ನಮ್ಮನ್ನು ಕಾಡಿಸುವ ನಿನಗೆ ನಮ್ಮ ಉಸಿರುತಾಗದೆ ಹೋಗದು ! ಒಂದು ದಿನ ನೀನೂ ಇದನ್ನೇ ಅನುಭವಿಸುವೆಯೋ ದುಷ್ಟಾ ! ಎಚ್ಚರದಿಂದಿರು !" ಎಂದು ಅರಚಿದರು.

ಅವರ ಶಾಪಗಳನ್ನು ಕೇಳಿದ ಕ್ಷಣದಲ್ಲಿ ಸುದೀಪನು ನಗಾಡುತ್ತಾ ಇದ್ದರೂ, ಮನಸ್ಸಿನೊಳಗಿನ ಯಾವುದೋ ಒಂದು ಮೂಲೆಯಲ್ಲಿ ಏನೋ ಭಯದ ಸುಳಿ ಅಲುಗಿತು. ಆಮೇಲೆ ಏನೋ ಅಧೈರ್ಯದಿಂದ, ಕಂಡರೂ ಕಾಣದವನಂತೆ ಅವರ ತಂಟೆಗೆ ಹೋಗದೆ ಗಪ್‌ಚಿಪ್ಪಾಗಿಬಿಟ್ಟನು.

ಕೆಲವು ದಿನಗಳ ಮೇಲೆ ಅವನ ತಂದೆ ಆ ಊರನ್ನು ಬಿಟ್ಟು ಪಟ್ಟಣಕ್ಕೆ ಹೋಗಿ ತಳ ಊರಿದನು. ಕ್ರಮವಾಗಿ ಸುದೀಪನು ಅಲ್ಲಿಯೇ ದೊಡ್ಡವನಾದನು. ಅವನ ತಂದೆ ಪಟ್ಟಣದಲ್ಲಿ ವ್ಯಾಪಾರ ಮಾಡಿ ಧನಸಂಪಾದನೆ ಮಾಡಿ ದೊಡ್ಡ ಶ್ರೀಮಂತನಾದನು. ಯುಕ್ತವಯಸ್ಕನಾದ ಸುದೀಪನಿಗೆ ತಕ್ಕ ಸುಂದರಿಯಾದ ಕನ್ಯೆಯೊಂದಿಗೆ ವಿವಾಹವಾಯಿತು. ಮುಂದೆ ಕಾಲಕ್ರಮದಲ್ಲಿ ಸುದೀಪನ ತಾಯಿಯೂ, ತಂದೆಯೂ ಗತಿಸಿದರು.

ಸುದೀಪನು ಹೆಂಡತಿಯನ್ನು ಬಹಳ ಪ್ರೇಮದಿಂದ ನೋಡಿಕೊಳ್ಳುತ್ತಿದ್ದನು. ಅವಳು ಗರ್ಭಿಣಿಯಾಗಿ ನವಮಾಸಗಳು ಸಮೀಪಿಸುತ್ತಿರಲು, ಪ್ರಸವ, ಬಾಣಂತಿ ತನಗಳಿಗಾಗಿ ಸುದೀಪನು ಅವಳನ್ನು ಕರೆದುಕೊಂಡು ಹೋಗಿ ಅವಳ ತೌರುಮನೆಯಲ್ಲಿ ಬಿಟ್ಟು ಹಿಂದಿರುಗಿದನು. ಹುಟ್ಟಲಿರುವ ಮಗುವಿನ ಯೋಚನೆಯೇ ಮನಸ್ಸಿನಲ್ಲಿ ತುಂಬಿಕೊಂಡಿತ್ತು.

ಹಾಗೆ ಹೆಂಡತಿಯನ್ನು ಬಿಟ್ಟು ಬಂದ ದಿನ ರಾತ್ರಿ ಸುದೀಪನಿಗೆ ಬಹಳ ಹೊತ್ತಿನವರೆಗೆ ನಿದ್ರೆ ಬರಲಿಲ್ಲ. ತಾನು ಹುಟ್ಟಿ ಬೆಳೆದ ಊರಿನಲ್ಲಿಯ ವಿಶೇಷಗಳು ಒಂದೊಂದೇ ನೆನಪಿಗೆ ಬರತೊಡಗಿದವು. ತಾನು ಆಗಾಗ ಬೇಕೆಂದೇ ವಿಕಲಾಂಗರನ್ನು ಅವಹೇಳನೆ ಮಾಡಿದುದನ್ನು ನೆನೆಸಿಕೊಂಡನು. ಅದೊಂದು ದಿನ ಕುಂಟುತಾತನೊಂದಿಗೆ ಉಳಿದ ಮೂವರು ವಿಕಲಾಂಗರೂ ವಿಪರೀತ ಕೋಪದಿಂದ ತನ್ನ ಮೇಲೆ ಮುಗಿಬಿದ್ದುದನ್ನು ನೆನೆದನು. ಆಗ ಹೊರಟ ಅವರ ಶಾಪವಾಕ್ಯಗಳು ಅವನನ್ನು ಜುಮು ಗುಟ್ಟಿಸಿದುವು. ಎಂಥದೋ ಭಯದಿಂದ ನಡುಗುತ್ತಿರಲು, ಹಾಗೆಯೇ ನಿದ್ದೆಯೊಳಗೆ ಜಾರಿಕೊಂಡನು.

ಅವನ ಹೆಂಡತಿ ಗಂಡು ಮಗುವನ್ನು ಹಡೆದಳೆಂಬ ಸುದ್ದಿ ಬಂದ ಕೂಡಲೇ ಸುದೀಪನು ಮಗುವನ್ನು ನೋಡಲು ಹೊರಟನು. ಆ ಮಗುವಿಗೆ ಸೊಟ್ಟ ಕೈಗಳು, ಕುಂಟು ಕಾಲು, ವಾರೆ ಮೂಗು, ಮೆಳ್ಳೆಗಣ್ಣು ! ಅಂತಹ ಮಗುವನ್ನು ನೋಡಲಾಗದೆ ಸುದೀಪನು ನಿಶ್ಚೇಷ್ಟಿತನಾದನು.

ಸುದೀಪನ ಹೆಂಡತಿ ಮಾತ್ರ ಏನೂ ಆಗದವಳಂತೆ, "ನೋಡಿದಿರಾ ! ದೇವರು ಕೊಟ್ಟ ಮಗು ! ಎಷ್ಟು ಮುದ್ದುಮುದ್ದಾಗಿದ್ದಾನೆ ! ಬಂಗಾರದ ಬೊಂಬೇ !

ಅಯ್ಯೋ ! ಹಾಗನ್ನಬಾರದು, ನನ್ನದೇ ದೃಷ್ಟಿ ಬಿದ್ದೀತು !" ಎಂದು ದೃಷ್ಟಿ ಮುರಿದಳು.

ಹೆತ್ತವಳಿಗೆ ಹೆಗ್ಗಣವೂ ಮುದ್ದೇ. ತನ್ನ ಮಗು ಹೇಗಿದ್ದರೂ ತಾಯಿಗೆ ಮುದ್ದಾಗಿಯೇ ಕಾಣುತ್ತದೆ. ಇದನ್ನು ತಿಳಿದು ಸುದೀಪನು "ಹೌದೌದು ! ಎಷ್ಟೊಂದು ಮುದ್ದಾಗಿದ್ದಾನೆ ನನ್ನ ಮಗ !" ಎಂದು ಉಸಿರುಬಿಟ್ಟನು.



ಆ ದಿನದಿಂದಲೂ ಸುದೀಪನು ಒಂದು ವಿಚಿತ್ರವನ್ನು ಗಮನಿಸಿದನು. ಹೆಂಡತಿಯಾಗಲಿ, ಮಗುವನ್ನು ನೋಡಿದ ಯಾರೇ ಆಗಲಿ, ಮಗುವಿನ ವಿಕಲಾಂಗವನ್ನು ಕುರಿತು ಚಕಾರವೆತ್ತುತ್ತಿರಲಿಲ್ಲ. ಸುಮ್ಮನೆ ಮಗು ಚೆಂದಾಗಿದೆಯೆಂದು ಹೊಗಳಿ ಹೋಗುತ್ತಿದ್ದರು. ಮಮಕಾರದಿಂದ ಹೆಂಡತಿಯೂ, ತಾನು ದೊಡ್ಡ ಧನವಂತನಾದುದರಿಂದ ಬಂಧುಗಳೂ, ತನ್ನ ಮಗನನ್ನು ಅವಹೇಳನೆ ಮಾಡುವುದಿಲ್ಲವೆಂದು ಅವನಿಗೆ ಗೊತ್ತಾಯಿತು.

ಮಗನು ಬೆಳೆಯುತ್ತ ದೊಡ್ಡವನಾಗುತ್ತಿದ್ದಂತೆ ಸುದೀಪನಲ್ಲಿ ಚಿಂತೆಯೂ ದಿಗಿಲೂ ಹೆಚ್ಚಾಯಿತು. ತನ್ನ ಮಗನು ವಿಕಲಾಂಗನೆಂಬ ಮಾತು ನಿಜವೇ. ಇನ್ನು ಹತ್ತು ಮಂದಿಗಳ ಇದಿರಿನಲ್ಲಿ ಅವನು ಅವಹೇಳನೆಗೆ ಗುರಿಯಾಗುತ್ತಾನೆ. ಆದುದರಿಂದ ಅವನು ತಾಯಿಯ ಹತ್ತಿರವೋ, ತನ್ನ ಹತ್ತಿರವೋ ಮುದುಡಿಕೊಂಡೇ ಇರಬೇಕು. ಅವನು ಯಾರೊಡನೆಯಾದರೂ ಆಡುವಾಗ, ಹತ್ತಿರದಲ್ಲಿ ತಾಯಿಯಾಗಲಿ, ತಂದೆಯಾಗಲಿ ಇರಬೇಕಾಗುತ್ತದೆ. ಆಗ ಯಾರೂ ಅವಹೇಳನೆ ಮಾಡಲಾರರು.

ಈ ಬಗೆಯ ಕಟ್ಟು ಪಾಡಿನಲ್ಲೇ ಸುದೀಪನು ಮಗನನ್ನು ಬೆಳೆಯಿಸಿಕೊಂಡಿದ್ದನು. ಚಿಕ್ಕಂದಿನಲ್ಲಿ ತಾನು ವಿಕಲಾಂಗರನ್ನು ನೋಡಿ ಅವಹೇಳನೆ ಮಾಡಿದಾಗ ಅವರೆಷ್ಟು ಸಂಕಟಪಟ್ಟರೆಂಬುದು ಈಗ ಅವನಿಗೆ ಅರ್ಥವಾಯಿತು. ಅವರ ಶಾಪಗಳ ಫಲವಾಗಿಯೇ ತನಗೆ ಇಂತಹ ಮಗನು ಹುಟ್ಟಿದನೆಂದು ಸುದೀಪನು ನಂಬಿದನು.

ಹೀಗಿರುವಾಗ ಸುದೀಪನ ಮನೆಯ ಸಮೀಪದಲ್ಲಿದ್ದ ಛತ್ರಕ್ಕೆ ಸನ್ಯಾಸಿಯೊಬ್ಬನು ಬಂದು ಉಳಿದುಕೊಂಡನು. ಆತನಲ್ಲಿ ಬಹಳ ಅದ್ಭುತ ಶಕ್ತಿಗಳಿರುವಂತೆಯೂ, ಮಹಾತ್ಮನಾಗಿರುವಂತೆಯೂ ಎಲ್ಲರೂ ಹೇಳಿಕೊಳ್ಳುತ್ತಿದ್ದರು.

ಸುದೀಪನು ಆ ಸನ್ಯಾಸಿಯನ್ನು ತನ್ನ ಮನೆಗೆ ಆಹ್ವಾನ ಮಾಡಿ, ಉಪಚರಿಸಿ ತನ್ನಮಗನನ್ನು ಅವನ ಮುಂದಿರಿಸಿದನು.

"ಗೃಹದೀಪದಂತಹ ಮಗ ! ನೀನು ಬಹಳ ಅದೃಷ್ಟಶಾಲಿಯಪ್ಪಾ !" ಎಂದನು ಸನ್ಯಾಸಿ.

ಸುದೀಪನು ಮಗನನ್ನು ಒಳಗೆ ಕಳುಹಿಸಿ, ಸನ್ಯಾಸಿಯ ಮುಂದೆ ತನ್ನ ಮನಸ್ಸಿನ ಕೊರಗನ್ನು ಹೇಳಿಕೊಂಡನು. ಚಿಕ್ಕಂದಿನಲ್ಲಿ ತಾನು ಮಾಡಿದ ತಪ್ಪುಗಳನ್ನು ಕೂಡಾ ಹೇಳಿದನು. ಅದನ್ನೆಲ್ಲ ಕೇಳಿ

ಸನ್ಯಾಸಿಯ ಮುಖವು ಗಂಭೀರಭಾವ ತಾಳಿತು. ಅವನು ಸ್ವಲ್ಪ ಹೊತ್ತು ಕಣ್ಣು ಮುಚ್ಚಿ ಆಲೋಚನೆ ಮಾಡಿ, " ನೀನು ಕೂಡಲೇ ನಿನ್ನ ಊರಿಗೆ ಹೋಗಿ ಈ ಮೊದಲು ನೀನು ಅವಹೇಳನೆ ಮಾಡಿದ ಆ ವಿಕಲಾಂಗರನ್ನು ನೋಡಿ ಕ್ಷಮೆ ಕೇಳಿಕೋ. ಅವರಲ್ಲಿ ಕುಂಟುತಾತ ಈಗ ಬದುಕಿರುವುದಿಲ್ಲ. ಆ ಊರಲ್ಲಿಯೇ ಅವನ ಸಮಾಧಿಯೊಂದಿದೆ. ಆ ಸಮಾಧಿಯ ಮುಂದೆ ನಿಂತು ಕ್ಷಮಾಪಣೆ ಹೇಳಿಕೋ. ನಿನ್ನ ಮಗನ ವಿಕಾರ ಲಕ್ಷಣಗಳು ಹೋಗಿ ನಿನಗೆ ಶುಭವಾಗುತ್ತದೆ " ಎಂದು ಹೇಳಿದನು.

ಕೂಡಲೇ ಸುದೀಪನು ಪ್ರಯಾಣ ಮಾಡಿ ತನ್ನ ಊರಿಗೆ ಹೋದನು. ಅಲ್ಲಿ ಮೆಳ್ಳೆಗಣ್ಣಿನ, ವಕ್ರ ಮೂಗಿನ, ಸೊಟ್ಟಕೈಗಳ ವಿಕಲಾಂಗರನ್ನು ನೋಡಿ, ತಾನು ಯಾರೆಂಬುದನ್ನು ಹೇಳಿ ಕ್ಷಮಿಸಬೇಕೆಂದು ಕೇಳಿಕೊಂಡನು,

ಅವರು ಅವನ ಮುಂದೆ ಬಹಳ ಮರ್ಯಾದೆ ಯಿಂದ, " ಅಯ್ಯಾ ! ಹಗೆಗಳಿಗೆ ಕೂಡಾ ನಮ್ಮಂತಹ ಅನಾಕಾರೀ ಮಕ್ಕಳು ಹುಟ್ಟಬೇಕೆಂದು ಕೋರ ಲಾರೆವು. ನಿಮ್ಮ ಮಗನ ಅವಲಕ್ಷಣಗಳು ನಾವು ಕ್ಷಮಿಸಿದರೆ ಹೋಗುತ್ತದೆಂದು ನೀವು ಹೇಳುವು ದಾದರೆ ನಾವು ಮನಃಪೂರ್ವಕ ನಿಮ್ಮನ್ನು ಕ್ಷಮಿ ಸುತ್ತೇವೆ ಅಯ್ಯಾ !" ಎಂದರು.

ಅವರ ಒಳ್ಳೆಯತನಕ್ಕೆ ಸುದೀಪನು ಬಹಳ ಸಂತೋಷಪಟ್ಟು, ಅವರಿಗೆ ತಲಾ ಹತ್ತು ಬಂಗಾರದ ನಾಣ್ಯಗಳನ್ನು ಕೊಟ್ಟು, ಕುಂಟುತಾತನ ಸಮಾಧಿಯ ಬಳಿಗೆ ಹೋದನು.

" ತಾತಾ ! ನೀನು ಕುಂಟನೆಂದು ಎಗತಾಳಿ ಮಾಡಿದ್ದೇನೆ. ನನ್ನ ದುರ್ಬುದ್ಧಿಯನ್ನು ಕ್ಷಮಿಸಿ ನನ್ನ ಮಗನನ್ನು ಆಶೀರ್ವದಿಸು !" ಎಂದು ಕಣ್ಣೀರು ತುಂಬಿ ಬೇಡಿದನು.

ಮರುಕ್ಷಣದಲ್ಲೇ ಸುದೀಪನಿಗೆ ಎಚ್ಚರವಾಯಿತು. ಸ್ವಪ್ನದಲ್ಲಾದರೇನಾಯಿತು ? ತಾನು ಅವಮಾನ ಪಡಿಸಿದವರೆಲ್ಲಾ ಕ್ಷಮಿಸಿದೆವೆಂದು ಹೇಳಿದುದರಿಂದ ಅವನು ಆನಂದದಿಂದಲೇ ಎದ್ದಿದ್ದನು.

ಮುಂದೆ ಒಂದು ವಾರದ ಮೇಲೆ ಅವನ ಮಾವನ ಮನೆಯಿಂದ, ಸುದೀಪನಿಗೆ ಗಂಡುಮಗುವಾಯಿ ತೆಂದೂ, ತಾಯಿ ಮಗು ಕ್ಷೇಮವೆಂದೂ ಸುಖ ಪ್ರಸವವೆಂದೂ ಸುದ್ದಿಬಂದಿತು.

ಕೂಡಲೇ ಸುದೀಪನು ಅತ್ತೆಯವರ ಮನೆಗೆ ಹೋಗಿ, ಮುದ್ದಿನ ಮೂಟೆಯಂತಿದ್ದ ತನ್ನ ಮಗನನ್ನು ನೋಡಿ, ಹೆಂಡತಿಯೊಂದಿಗೆ, " ಚಿಕ್ಕಂದಿನಲ್ಲಿ ನನ್ನಿಂದ ಅವಮಾನಿತರಾದ ನಾಲ್ವರು ವಿಕಲಾಂಗರೂ ನಿಜಕ್ಕೂ ನನ್ನನ್ನು ಕ್ಷಮಿಸಿದ್ದಾರೆ. ಆದುದರಿಂದಲೇ ಮಗು ಚೆಂದಾಗಿದೆ " ಎಂದನು ಸಂತೋಷದಿಂದ.






# ಬುದ್ಧಿಯ ಮಾರ್ಪಾಡು

**ವ**ಮತ್ತೆಲ್ಲಿಗೂ ತಪ್ಪಿಸಿಕೊಳ್ಳಲಾಗದೆ, ಮರದ ಕೊಂಬೆಯಲ್ಲೇ ನೇತಾಡಿಕೊಂಡಿರುವ ಬೇತಾಳಾವೇಶಿತವಾದ ಶವವನ್ನು, ಮತ್ತೆ ಬಂದ ರಾಜಾ ತ್ರಿವಿಕ್ರಮನು ಕೆಳಗಿಳಿಸಿ, ತನ್ನ ಹೆಗಲ ಮೇಲೇರಿಸಿಕೊಂಡು ಮೌನ ಮುದ್ರೆಯಿಂದ ಸ್ಮಶಾನದ ಕಡೆಗೆ ನಡೆಯತೊಡಗಿದನು. ಆಗ ಶವದ ಬಾಯಿಯ ಮೂಲಕ ಬೇತಾಳವು ಮಾತಾಡಲು ತೊಡಗಿ, "ಎಲೈ ಮಹಾರಾಜನೇ, ಇಂತಹ ನಡುರಾತ್ರಿಯ ಹೊತ್ತಿನಲ್ಲಿ ಭಯಂಕರವಾದ ಸ್ಮಶಾನ ಮಾರ್ಗದಲ್ಲಿ ನೀನು ಮಾಡುವ ಸಾಹಸವು, ಎಂದೋ ಒಂದು ದಿನ ಫಲಿಸುವ ಅವಕಾಶವಿದೆ. ಎಂದುಕೊಂಡರೂ, ಆಗ ನಿನ್ನ ಮನಸ್ಸು ಹೇಗೆ ಬದಲಾವಣೆಗೊಳ್ಳುವುದೋ ಹೇಳಲು ಸಾಧ್ಯವಿಲ್ಲ. ಕ್ಷತ್ರಿಯ ಧರ್ಮವನ್ನನುಸರಿಸಿ ಪರರಾಜ್ಯವನ್ನು ಜಯಿಸಿದ ದೊಡ್ಡ ಪರಾಕ್ರಮಿಗಳಾದ ರಾಜರೇ ಅಲ್ಪ ವಿಮರ್ಶೆಗೂ, ಮತ್ತೇನೋ ಶಂಕೆಗಳಿಗೂ ಹೆದರಿ ಕೈಗೆ ಸಿಕ್ಕಿದ ವಿಜಯವನ್ನು ಬಿಟ್ಟುಕೊಟ್ಟು ಪಲಾಯನ ಮಾಡುವುದುಂಟು. ನೀನು ಕೂಡಾ ಕಾರ್ಯ ಸಾಧನೆಯಾದ ಮೇಲೆ ಹಾಗೆ ಮಾಡಲಾರೆ ಎಂದು ಹೇಗೆ ನಂಬಲು ಸಾಧ್ಯ? ಉದಾಹರಣೆಯಾಗಿ.

## ಬೇತಾಳಕಥೆಗಳು



ನಿನಗೆ ಕೀರ್ತಿಸೇನನೆಂಬ ರಾಜನ ಕಥೆಯನ್ನು ಹೇಳುತ್ತೇನೆ," ಎಂದು ಕಥೆಯನ್ನು ಪ್ರಾರಂಭಿಸಿತು:

ಉಜ್ವಲ ದೇಶದ ಗಿರಿಪುರವೆಂಬ ಒಂದು ಊರಿನಲ್ಲಿ ಮೈಥಿಲಿ ಮತ್ತು ವಾಸಂತಿಕಾ ಎಂಬ ಇಬ್ಬರು ಅಕ್ಕತಂಗಿಯರಿದ್ದರು. ಚಿಕ್ಕತನದಲ್ಲೇ ತಾಯಿತಂದೆಯರನ್ನು ಕಳೆದುಕೊಂಡಿದ್ದ ಅವರನ್ನು ಅವರ ಅಜ್ಜಿಯೇ ಬೆಳೆಸಿ ದೊಡ್ಡವರಾಗುವಂತೆ ಮಾಡಿದಳು. ಆ ಅಜ್ಜಿ ಕೂಡಾ ತೀರಾ ಮುದುಕಿಯಾಗಿ ಒಂದು ದಿನ ಕಾಲಧರ್ಮ ಹೊಂದಿದಳು.

ಮೈಥಿಲಿಯೂ ವಾಸಂತಿಕೆಯೂ ಒಳ್ಳೆಯ ಸುಂದರಿಯರೇ. ಆದರೆ ವಿದ್ಯೆಯಲ್ಲಿ ಮೈಥಿಲಿಯೇ ಹೆಚ್ಚಿನವಳು. ವಾಸಂತಿಕೆ ಓದುಬರೆಹಗಳಲ್ಲಿ ಹೆಡ್ಡಿಯಾದರೂ ಮಧುರವಾಗಿ ಹಾಡಬಲ್ಲವಳು.

ಒಂದು ಸಾರಿ ಸರಿಯಾಗಿ ಮಳೆ ಬಾರದೆ ಉಜ್ವಲ ದೇಶದಲ್ಲಿ ಕ್ಷಾಮಕಾಲವು ಬಂದಿತು. ರಾಜನಾಗಿದ್ದ ವಿನಯವರ್ಮನು ಪ್ರಜೆಗಳ ಹೊಟ್ಟೆಬಟ್ಟೆಗಳಿಗಾಗಿ ತನಗೆ ಸಾಧ್ಯವಾದ ರೀತಿಯಲ್ಲಿ ಮಾಡಬೇಕಾದ ಅನೇಕ ಏರ್ಪಾಡುಗಳನ್ನು ಮಾಡುವ ಕೆಲಸಗಳಲ್ಲಿ ಗಮನ ಹರಿಸಿದನು. ಹಾಗೆ ರಾಜನು ಕ್ಷಾಮದ ಕಷ್ಟ ಪರಿಹಾರಗಳಲ್ಲೇ ತೀವ್ರವಾಗಿ ಗಮನ ಹರಿಸಿಕೊಂಡಿರುವಾಗ, ಹುಲಿ ಹಾವಳಿಯ ಮೇಲೆ ಹುತ್ತ ಮಗುಚಿ ಬಿದ್ದ ಹಾಗೆ, ಉಜ್ವಲ ದೇಶದ ಬಲಹೀನ ಪರಿಸ್ಥಿತಿಯನ್ನೇ ತನಗೆ ಅನುಕೂಲಪಡಿಸಿಕೊಂಡು, ನೆರೆಯಲ್ಲಿದ್ದ ವರಾಳಿ ದೇಶದ ರಾಜನಾದ ಕೀರ್ತಿಸೇನನು ದಂಡೆತ್ತಿ ಬಂದನು. ವಿನಯವರ್ಮ ರಾಜನು ಅವನನ್ನು ಇದಿರಿಸಿ ಸಾಧ್ಯವಾದಷ್ಟು ಹೋರಾಡಿದರೂ ಸೋತುಹೋದನು. ಕೀರ್ತಿಸೇನನು ರಾಜಧಾನಿಯನ್ನು ಆಕ್ರಮಿಸಿಕೊಂಡು ವಿನಯವರ್ಮನನ್ನು ಸೆರೆಮನೆಯಲ್ಲಿ ಹಾಕಿಸಿದನು.

ಉಜ್ವಲ ದೇಶವನ್ನು ಜಯಿಸಿಕೊಂಡ ಮೇಲೆ ಕೀರ್ತಿಸೇನನು, ಅಲ್ಲಿಯ ಕ್ಷಾಮ ಪರಿಸ್ಥಿತಿಯನ್ನು ಸ್ವತಃ ತಿರುಗಾಡಿ ನೋಡಿ, ಬಹಳ ಸಂಕಟಪಟ್ಟನು. ಈಗ ಆ ದೇಶಕ್ಕೆ ತಾನೇ ರಕ್ಷಕನಾದುದರಿಂದ ಪ್ರಜೆಗಳನ್ನು ಕಷ್ಟಗಳಿಂದ ಪಾರುಮಾಡಬೇಕಾದುದು ತನ್ನ ಹೊಣೆಯಾಗಿರುವುದನ್ನು ತಿಳಿದನು. ಅವನು ತನ್ನೊಂದಿಗೆ ಸ್ವಲ್ಪ ಸೈನ್ಯವನ್ನೂ, ಉದ್ಯೋಗಸ್ಥರನ್ನೂ ಕರೆದುಕೊಂಡು ದೇಶದೊಳಗಿನ ಎಲ್ಲಾ ಪ್ರಾಂತಗಳನ್ನೂ ಸಂದರ್ಶಿಸುತ್ತ, ವಿಚಾರಿಸುತ್ತ, ತಕ್ಕ ಸಹಾಯವನ್ನು ಮಾಡುತ್ತ ಬಂದನು.

ಕೀರ್ತಿಸೇನನು ಹೀಗೆ ದೇಶಪರ್ಯಟನೆ ಮಾಡುತ್ತ ಗಿರಿಪುರಕ್ಕೆ ಬಂದು ಹೋದ ದಿನದಲ್ಲಿ ವಾಸಂತಿಕೆ ಎಲ್ಲಿಯೋ ಕಾಣದೆ ಹೋದಳು. ಎಂದಿನಂತೆ ವಾಸಂತಿಕೆ ಬೆಳಿಗ್ಗೆ ನೀರು ತರಲಿಕ್ಕಾಗಿ ನದಿಯ ಕಡೆಗೆ ಹೋದವಳು ಮನೆಗೆ ಹಿಂದಿರುಗಿ ಬರಲಿಲ್ಲ.

ಮೈಥಿಲಿ ತಂಗಿಯನ್ನು ಹುಡುಕುತ್ತಾ ನದಿಗೆ ಹೋದಳು. ಅಲ್ಲಿ ವಾಸಂತಿಕೆಯ ಸುಳಿವೇನೂ ಕಾಣದಿದ್ದರೂ ಬಿಂದಿಗೆ ಮಾತ್ರ ನದಿಯ ಬದಿಯಲ್ಲಿ



ದ್ದಿತು. ಅವಳು ಬಿಂದಿಗೆಯನ್ನು ಅಲ್ಲಿಟ್ಟು ನದಿಯ ಮೇಲುಗಡೆಗೆ ಹೋದುದನ್ನು ನೋಡಿದೆವೆಂದು ಒಂದಿಬ್ಬರು ಹೇಳಿದರು. ನದಿಯೇನೋ ಒಣಗಿದ್ದಿತು. ಅಲ್ಲಲ್ಲಿಯ ಗುಂಡಿಗಳಲ್ಲಿ ಮಾತ್ರವೇ ನೀರಿದ್ದಿತು. ವಾಸಂತಿಕೆ ಒಳ್ಳೆಯ ನೀರಿನ ಗುಂಡಿಯನ್ನು ಹುಡುಕುತ್ತಾ ಹೋಗುವಾಗ, ಆ ಸಮಯದಲ್ಲಿ ಕೀರ್ತಿಸೇನನು ಸೈನಿಕರೊಂದಿಗೆ ಆ ಕಡೆಯಿಂದಲೇ ಹೋದನೆಂದು ಕೆಲವರು ಮೈಥಿಲಿಯೊಂದಿಗೆ ಹೇಳಿದರು. ಕೀರ್ತಿಸೇನನೇ ಅವಳನ್ನು ಅಪಹರಿಸಿ ಒಯ್ದಿರಬೇಕೆಂಬ ಅನುಮಾನವನ್ನೂ ಹೊರಪಡಿಸಿದರು.

ಇದನ್ನು ಕೇಳಿ ಮೈಥಿಲಿಗೆ ಕಳವಳವಾಯಿತು. ಅವಳು ಸೀದಾ ರಾಜಧಾನಿಗೆ ಹೋಗಿ, ರಾಜನ ದರ್ಶನಕ್ಕೆ ಬಂದಿರುವುದಾಗಿ ಹೇಳಿದಳು. ಆಗ ಸಭೆ ನಡೆಸಿಕೊಂಡಿದ್ದ ಕೀರ್ತಿಸೇನನು ಅವಳನ್ನು ತನ್ನ ಬಳಿಗೆ ಕರೆಯಿಸಿಕೊಂಡನು.

ಕೀರ್ತಿಸೇನನು ಅವಳು ಬಂದ ಸಮಾಚಾರವನ್ನು ತಿಳಿದು, " ಹೆದರಬೇಡ. ನಿನ್ನ ತಂಗಿಯನ್ನು ನಾನು ಹುಡುಕಿಸುತ್ತೇನೆ. ನಿನಗೆ ಯಾರ ಮೇಲೆಯಾದರೂ ಅನುಮಾನವಿದ್ದರೆ ಹೇಳು " ಎಂದನು.

" ನನಗೊಬ್ಬರ ಮೇಲೆ ಅನುಮಾನವಿದೆ ಪ್ರಭುಗಳೇ " ಎಂದಳು ಮೈಥಿಲಿ.

" ಯಾರ ಮೇಲೆ ನಿನ್ನ ಅನುಮಾನ ? " ಎಂದು ರಾಜನು ಪ್ರಶ್ನಿಸಿದನು.

" ಅಸಹಾಯಕಳಾಗಿದ್ದ ಒಬ್ಬಳು ಅಬಲೆಯನ್ನು ಸೆರೆಹಿಡಿದವರ ಮೇಲೆಯೇ ನನಗೆ ಅನುಮಾನ " ಎಂದಳು ಮೈಥಿಲಿ.

ಅವಳ ಮಾತಿಗೆ ಕೀರ್ತಿಸೇನನು ಆಶ್ಚರ್ಯಪಡುತ್ತ, " ನೀನು ಏನೋ ಗೂಢಾರ್ಥದಲ್ಲಿ ಹೇಳುವ ಹಾಗಿದೆ, ಧೈರ್ಯದಿಂದ ವಿವರವಾಗಿ ಹೇಳು " ಎಂದನು.

" ಹಾಗೆಯೇ ಹೇಳುತ್ತೇನೆ ಪ್ರಭೂ. ನಾನು ಎಲ್ಲದಕ್ಕೂ ಸಿದ್ಧಳಾಗಿಯೇ ಬಂದು ನಿಂತಿದ್ದೇನೆ. ಆದುದರಿಂದ ನನ್ನನ್ನು ನೀವು ಕಠಿಣವಾಗಿ ಶಿಕ್ಷಿಸುವಿರೆಂಬ ಭಯ ನನಗಿಲ್ಲ. ನಾನು ಅನುಮಾನಿಸುವುದು ನಿಮ್ಮನ್ನೇ " ಎಂದಳು ಮೈಥಿಲಿ.

ಕೀರ್ತಿಸೇನನು ಕ್ಷಣಕಾಲ ಬೆರಗಾಗಿ " ನನ್ನನ್ನೋ ! " ಎಂದು ಗದರಿಸುವಂತೆ ಕೇಳಿದನು.

ಮೈಥಿಲಿ ಸ್ವಲ್ಪವೂ ಚಲಿಸದೆ, ಇನ್ನಷ್ಟು ದೃಢ ಸ್ವರದಲ್ಲಿ, " ಹೌದು ಪ್ರಭೂ. ನಿಮಗೆ ಕೋಪವು ಬರುವುದೆಂದು ನನಗೆ ಮೊದಲೇ ಗೊತ್ತಿದೆ. ಆದರೆ ಇದು ನನ್ನ ಒಬ್ಬಳ ಅನುಮಾನವಲ್ಲ. ಗಿರಿಪುರ ವಾಸಿಗಳ ಎಲ್ಲರ ಅನುಮಾನವೂ ಹೀಗೆಯೇ ಇದೆ. ನೀವು ದೀನಸ್ಥಿತಿಯಲ್ಲಿರುವ ನಮ್ಮ ರಾಜ್ಯಲಕ್ಷ್ಮಿಯನ್ನು ಸೆರೆಹಿಡಿದ ಧರ್ಮದೂರರಾದವರು. ಅಂತಹ ನೀವು ವಯಸ್ಸಿನಲ್ಲಿರುವ ಸುಂದರ ತರುಣಿಯನ್ನು, ಏಕಾಂಗಿನಿಯಾಗಿ ದೊರೆತವಳನ್ನು ಅಪಹರಿಸಲಿಲ್ಲವೆಂದರೆ ಹೇಗೆ ನಂಬಲಿ ? ನೀವು ಸೈನ್ಯದೊಂದಿಗೆ ಶ್ಯಾಮಳಮುಖೀ ನದಿಯ ಪ್ರಾಂತದಿಂದ ಹೋಗು

ವಾಗಲೇ ಅವಳು ಮಾಯವಾಗಿದ್ದಾಳೆ!" ಎಂದಳು. ಮೈಥಿಲಿಯ ಮಾತಿನಲ್ಲಿ ನಿಶಿತವಾದ ವಿಮರ್ಶೆಯೂ ಇದ್ದಿತು. ಸುಲಭವಾಗಿ ಅಲ್ಲಗಳೆಯಲು ಸಾಧ್ಯವಿಲ್ಲ ದಂತಹ ಅಭಿಯೋಗವೂ ಇದ್ದಿತು. ಹರಿತವಾದ ತರ್ಕಬದ್ಧತೆಯೂ ಒಳಗೊಂಡಿದ್ದಿತು.

ಅಷ್ಟು ದೊಡ್ಡ ಸಭೆಯ ಮಧ್ಯದಲ್ಲಿ ಅವಳಿಗೆ ಏನು ಉತ್ತರ ಹೇಳಬೇಕೆಂದು ತೋರದೆ ಕೀರ್ತಿ ಸೇನನು ತಲೆ ತಗ್ಗಿಸಿಕೊಂಡನು. ಸಭಿಕರಿಗೆ ಅವಳ ಮಾತಿನಲ್ಲಿ ಪ್ರಾಮಾಣಿಕತೆಯೂ, ನ್ಯಾಯವೂ ಇರು ವಂತಹ ಭ್ರಾಂತಿಯೂ ಇದೆ. ತಾನು ಹಾಗೆ ಮಾಡ ಲಿಲ್ಲವೆಂದು ಹೇಳಿದರೆ ಎಲ್ಲರೂ ಸುಮ್ಮನಿರುತ್ತಾ ರೆಂಬುದೇನೋ ನಿಜವೇ, ಅದು ರಾಜ ಭಯದಿಂದಲೇ ಹೊರತು ಹೃದಯಪೂರ್ವಕವಾಗಿ ಅಲ್ಲ.

ಸ್ವಲ್ಪ ಹೊತ್ತು ಆಲೋಚನೆ ಮಾಡಿದ ಮೇಲೆ ಕೀರ್ತಿಸೇನನು ತಲೆಯೆತ್ತಿ ಮೈಥಿಲಿಯನ್ನು ನೋಡಿ, "ನಿನ್ನ ತಂಗಿಯನ್ನು ನಾನು ಅಪಹರಿಸಲಿಲ್ಲವೆಂದು ದೈವಸಾಕ್ಷಿಯಾಗಿ ಹೇಳುತ್ತೇನೆ. ಅವಳನ್ನು ಹುಡುಕಿ ಸುವುದು ನನ್ನ ಆದ್ಯ ಕರ್ತವ್ಯ. ಈಗ ನೀನು ಹೊರಟುಹೋಗು" ಎಂದನು.

ಮೈಥಿಲಿ ಗಿರಿಪುರಕ್ಕೆ ಹಿಂದಿರುಗಿದಳು. ಅವಳ ಸಾಹಸವನ್ನೂ ಧೈರ್ಯವನ್ನೂ ನೋಡಿ ಕೀರ್ತಿಸೇನನು ತನ್ನೊಳಗೆ ಮೆಚ್ಚಿಕೊಂಡನು. ಅವಳ ಸೌಂದರ್ಯವೂ ಅವನನ್ನು ಆಕರ್ಷಿಸಿತು. ವಾಸಂತಿಕೆಯ ವಿಷಯ ಗೊತ್ತಾದ ಮೇಲೆ, ಈ ಮೈಥಿಲಿಯನ್ನೇ ವಿವಾಹ ಮಾಡಿಕೊಳ್ಳಬೇಕೆಂದೂ ಅಂದುಕೊಂಡನು.

ಮೈಥಿಲಿ ತನ್ನ ಮನೆಗೆ ಬಂದು ಸೇರಿದಾಗ, ವಾಸಂತಿಕೆ ಮನೆಯಲ್ಲೇ ಇದ್ದಳು. ಅವಳು ಸಂಗೀತ ಕಲಾಶಾಲೆಯಲ್ಲಿ ಸಂಗೀತ ಕಲಿಯುತ್ತಿರುವಾಗ, ಸಹಾಧ್ಯಾಯಿಯಾಗಿದ್ದ ಒಬ್ಬ ಯುವಕನನ್ನು, ದೇವಾ ಲಯದಲ್ಲಿ ಮದುವೆಯಾಗಿ ಅವನೊಂದಿಗೆ ಮನೆಗೆ ಬಂದಿದ್ದಳು. ಈ ಸಂಗತಿಯನ್ನು ಮುಂದಾಗಿ ಅಕ್ಕನೊಂದಿಗೆ ಹೇಳಿದರೆ, ಅವಳು ಒಪ್ಪಲಾರ ಳೆಂದೂ, ಅಕ್ಕನಿಗಿಂತ ಮೊದಲು ತಾನು ಮದುವೆ ಯಾಗುವೆನೆನ್ನಲು ನಾಚಿಕೊಂಡಳೆಂದೂ, ಆ



ಯುವಕನ ಅಜ್ಜಿ ಸಾಯುವ ಮೊದಲು ಮೊಮ್ಮಗನ ಮದುವೆಯನ್ನು ನೋಡಬೇಕೆಂದು ಹೇಳಿದುದರಿಂದಲೇ, ತಾನು ಹಾಗೆ ಮಾಡಬೇಕಾಯಿತೆಂದೂ ಪಾಸಾಳಿಕೆ ಹೇಳಿದಳು.

ಮೈಥಿಲಿ ನೂತನ ದಂಪತಿಗಳನ್ನು ಹರಸಿ, ಮತ್ತೆ ರಾಜಧಾನಿಗೆ ಹೋಗಿ, ಕೀರ್ತಿಸೇನನೊಂದಿಗೆ ತಂಗಿಯ ವಿಷಯವನ್ನು ಹೇಳಿ, ತನ್ನನ್ನು ಕ್ಷಮಿಸಬೇಕೆಂದು ಬೇಡಿಕೊಂಡಳು.

ಕೀರ್ತಿಸೇನನು ನಗುತ್ತ, "ಇದರಲ್ಲಿ ಕ್ಷಮಿಸುವಂತಹುದೇನಿಲ್ಲ ಬಿಡು. ನಾನು ನಿಮ್ಮ ಈ ದೇಶವನ್ನೇ ಬಿಟ್ಟು ಹೊರಟುಹೋಗಲು ನಿಶ್ಚಯಿಸಿದ್ದೇನೆ. ನಿಮ್ಮ ರಾಜನಿಗೇ ಮತ್ತೆ ಸಿಂಹಾಸನವನ್ನು ಒಪ್ಪಿಸುತ್ತೇನೆ. ಓ ಮೈಥಿಲೀ, ನೀನು ನಿನಗೆ ತಿಳಿಯದ ಹಾಗೆಯೇ ನನಗೆ ದೊಡ್ಡ ಉಪಕಾರ ಮಾಡಿರುವಿ. ನಾನು ಕೊಡುವ ಈ ಕಾಣಿಕೆಗಳನ್ನು ಸ್ವೀಕರಿಸಿ ಸುಖವಾಗಿರು" ಎಂದು ಹೇಳಿ ಅವಳಿಗೆ ಬೆಲೆ ಬಾಳುವ ವಸ್ತ್ರಾಭರಣಾದಿಗಳನ್ನು ಬಹುಮಾನವಾಗಿ ಕೊಟ್ಟು ಕಳುಹಿಸಿ, ಸೆರೆಮನೆಯಿಂದ ವಿನಯವರ್ಮನನ್ನು ಮುಕ್ತಗೊಳಿಸಿ, ರಾಜ್ಯವನ್ನು ಅವನ ವಶಕ್ಕೆ ಕೊಟ್ಟು ಸ್ನೇಹದ ಒಪ್ಪಂದ ಮಾಡಿಕೊಂಡು ಹೊರಟುಹೋದನು.

ಬೇತಾಳವು ಹೀಗೆ ಕಥೆಯನ್ನು ಮುಗಿಸಿ, "ರಾಜಾ, ಕೀರ್ತಿಸೇನನಲ್ಲಾದ ಈ ಬುದ್ಧಿಯ ಮಾರ್ಪಾಡಿಗೆ ಏನು ಹೇಳಬೇಕು ? ಪೂರ್ವಾಪರಗಳನ್ನು ನೋಡುವಾಗ ಅವನ ರೀತಿ ವಿಚಿತ್ರವಾಗಿ ಕಾಣುವುದಿಲ್ಲವೆ ? ತನ್ನನ್ನು ತುಂಬಿದ ಸಭೆಯಲ್ಲಿ ಅವಮಾನಪಡಿಸಿದ ಮೈಥಿಲಿಯನ್ನು ಮದುವೆಯಾಗಲು ಆಶಿಸುವುದೆಂಥರೇನು ? ಹಾಗೆ ಅಂದುಕೊಂಡವನು ಕಡೆಗೆ ಆ ಸುದ್ದಿಯೇ ಎತ್ತಲಿಲ್ಲವೇಕೆ? ಎಲ್ಲಕ್ಕಿಂತ ವಿಚಿತ್ರವೆಂದರೆ ತಾನು ಗೆದ್ದ ರಾಜ್ಯವನ್ನೇ ಬಿಟ್ಟುಹೋದುದು ! ಇದು ಅವನ ಅವಿವೇಕವಲ್ಲದೆ ಮತ್ತೇನಿರಬಹುದು ? ಈ ಸಂದೇಹಗಳಿಗೆ ತಕ್ಕ ಉತ್ತರ ತಿಳಿದಿದ್ದೂ ಹೇಳದೆ ಹೋದರೆ ನಿನ್ನ ತಲೆ ಚೂರುಚೂರಾಗಿ ಹೋಗುತ್ತದೆ" ಎಂದು ಹೇಳಿತು.

ಅದಕ್ಕೆ ತ್ರಿವಿಕ್ರಮನು ಹೀಗೆಂದನು : "ಕೀರ್ತಿಸೇನನ ಬುದ್ಧಿ ಮಾರ್ಪಾಡಾದುದರಲ್ಲಿ ಅಷ್ಟು ದೊಡ್ಡ ಆಶ್ಚರ್ಯಪಡುವಂತಹುದೇನಿಲ್ಲ. ಅವನ ಗುಣಕ್ಕೆ ತಕ್ಕ ಹಾಗೆಯೇ ಆಗಿದೆ. ಒಂದು ದೇಶದ ರಾಜನು ದುಷ್ಟನಾಗಿದ್ದರೆ, ಬುದ್ಧಿಹೀನನಾಗಿದ್ದರೆ ಶತ್ರು ರಾಜನು ಆ ರಾಜ್ಯವನ್ನು ವಶಪಡಿಸಿಕೊಂಡು ಒಳ್ಳೆಯ ಕ್ರಮದಲ್ಲಿ ಆ ರಾಜ್ಯವನ್ನು ಪಾಲಿಸಿದರೆ ಪ್ರಜೆಗಳಿಗೆ ಅವನ ಮೇಲೆ ಭಕ್ತಿ ಗೌರವಗಳುಂಟಾಗುತ್ತವೆ. ಆದರೆ ಕೀರ್ತಿಸೇನನು ಸೋಲಿಸಿದ ಉಜ್ವಲ ದೇಶದ ರಾಜನು ದುಷ್ಟನೂ ಅಲ್ಲ, ಬುದ್ಧಿಹೀನನೂ ಅಲ್ಲ. ಸಾಧ್ಯವಾದಷ್ಟು ಮಟ್ಟಿಗೆ ರಾಜ್ಯಕ್ಕೆ ಬಂದ ಕಷ್ಟಕಾಲವನ್ನು ಸಮಗೊಳಿಸುವ ಕಾರ್ಯಗಳಲ್ಲೇ ನಿರತನಾಗಿದ್ದವನು. ಅಂತಹವನನ್ನು ಸಿಂಹಾಸನ ಭ್ರಷ್ಟನಾಗುವಂತೆ ಮಾಡಿದ ನೆರೆದೇಶದ ರಾಜನು ಎಂದಿಗೂ ಪ್ರಜೆಗಳ ಗೌರವಾಭಿಮಾನಿಗಳಿಗೆ ಪಾತ್ರನಾಗಲಾರನು.

ಈ ವಿಷಯವನ್ನು ಕೀರ್ತಿಸೇನನಿಗೆ ತುಂಬಿದ ಸಭೆಯಲ್ಲಿ ಮೈಥಿಲಿ ತನ್ನನ್ನು ಅವಮಾನಿಸಿದಂತೆ ಹೇಳಿದಾಗ ಅವನಿಗೆ ಅರ್ಥವಾಯಿತು. ಆದುದರಿಂದಲೇ ಅವನು ರಾಜ್ಯವನ್ನು ತಿರುಗಿ ವಿನಯವರ್ಮನಿಗೇ ಕೊಟ್ಟನು. ಇದು ಅವನ ವಿವೇಕವನ್ನೂ ರಾಜಕೀಯ ಚತುರತೆಯನ್ನೂ ತೋರಿಸುತ್ತದೆ.

ತುಂಬಿದ ಸಭೆಯಲ್ಲಿ ರಾಜನಾದ ತನ್ನನ್ನು ಅವಮಾನಿಸುವ ಹಾಗೆ ಮಾತಾಡಿದ ಮೈಥಿಲಿಯ ಧೈರ್ಯಕ್ಕೂ ಸೌಂದರ್ಯಕ್ಕೂ ಮುಗ್ಧನಾಗಿ, ಅವಳನ್ನು ಮದುವೆಯಾಗಬೇಕೆಂದು ಆಗ ಆತನಿಗೆ ತೋರಿದರೂ, ತನ್ನ ಆಲೋಚನೆಯಲ್ಲಿರುವ ಲೋಪವು ಆಮೇಲೆ ಅವನಿಗೆ ಗೊತ್ತಾಗಿದೆ. ವಾಸಂತಿಕೆ ಕಾಣದೆ ಹೋದ ವಿಷಯದಲ್ಲಿ ಅನುಮಾನವನ್ನೇ ಆಧಾರವಾಗಿಟ್ಟು ಪೂರ್ವಾಪರಗಳ ವಿವೇಚನೆ ಇಲ್ಲದೆ, ಪ್ರತ್ಯಕ್ಷ ಸಾಕ್ಷಿಯೂ ಇಲ್ಲದೆ ರಾಜನ ಮೇಲೆ ಅಪವಾದ ಹೇರಿದವಳು, ದುಡುಕು ಗುಣದವಳೆಂದು ಆಮೇಲೆ ಗೊತ್ತಾಯಿತು. ಸಾಮಾನ್ಯ ಸ್ತ್ರೀಗೆ ಅಂತಹ ದುಡುಕುತನವಿದ್ದರೆ ದೊಡ್ಡದಲ್ಲ. ರಾಣಿಯಾದವಳು ಅಂಥವಳಾದರೆ ಒಳ್ಳೆಯದಲ್ಲ. ಈ ಬಗೆಯ ವಿವೇಕದಿಂದಲೇ ಅವಳನ್ನು ಮದುವೆಯಾಗಬೇಕೆಂಬ ಆಲೋಚನೆಯನ್ನೂ ಬಿಟ್ಟನು. ವಿನಯವರ್ಮನೊಂದಿಗೆ ಸ್ನೇಹದ ಒಪ್ಪಂದ ಮಾಡಿಕೊಂಡುದರಿಂದ, ಉಭಯ ದೇಶಗಳಲ್ಲಿಯೂ ಅವನ ಶುಭ್ರವಾದ ಕೀರ್ತಿ ಹೆಚ್ಚುವಂತಾಯಿತು"

ಹೀಗೆ ರಾಜನಿಗೆ ಮೌನಭಂಗವಾದ ಕೂಡಲೇ ಬೇತಾಳವು ಶವದೊಂದಿಗೆ ಮಾಯವಾಗಿ ಹೋಗಿ ಮರದ ಕೊಂಬೆಯಲ್ಲಿ ನೇತಾಡತೊಡಗಿತು.





# ಉದ್ಯೋಗನಿಯಮನ

ಮಹೇಂದ್ರಪುರಿಯನ್ನು ಕನಕಗುಪ್ತ ರಾಜನು ಆಳಿಕೊಂಡಿದ್ದನು. ಒಂದು ಸಾರಿ ಕೋಶಾಗಾರದ ಅಧಿಪತಿಯಾದ ಪೀತಾಂಬರನು, ಕೋಶಾಗಾರದಲ್ಲಿ ಕೆಲಸದ ಒತ್ತಡ ಜಾಸ್ತಿಯಾಗಿರುವುದರಿಂದ ಇನ್ನಿಬ್ಬರು ಸಹಾಯಕರು ಬೇಕೆಂದು ಮಂತ್ರಿಯೊಡನೆ ವಿನಂತಿಸಿಕೊಂಡನು.

ಮಂತ್ರಿ ಅದಕ್ಕೆ ಅನುಮತಿ ಕೊಡುತ್ತ ಅವರಿಗೆ ತಲಾ ತಿಂಗಳಿಗೆ ಹನ್ನೆರಡು ವರಹಗಳನ್ನು ಸಂಬಳವಾಗಿ ಗೊತ್ತುಮಾಡುವಂತೆ ಹೇಳಿದನು.

ಪೀತಾಂಬರನು ಅನುಮತಿ ಕೊಟ್ಟುದಕ್ಕೆ ಮಂತ್ರಿಗೆ ಕೃತಜ್ಞತೆ ಹೇಳಿ, ಹೊರಟು ಹೋದನು.

ಬಳಿಕ ಅವನು ತನ್ನ ಕೈಕೆಳಗಿನವರಾಗಿ ಮೂವರನ್ನು ಉದ್ಯೋಗಕ್ಕೆ ನಿಯಮಿಸಿಕೊಂಡದ್ದೂ ಆಯಿತು.

ಈ ಸಂಗತಿಯನ್ನು ತಿಳಿದು ಮಂತ್ರಿಗೆ ಬಹಳ ಕೋಪ ಬಂದಿತು. ಅವನು ಪೀತಾಂಬರನ ಹತ್ತಿರ ಏನೂ ಪ್ರಶ್ನೆ ಮಾಡದೆ, ಕನಕಗುಪ್ತ ರಾಜನ ಬಳಿಗೆ ಹೋಗಿ, "ಪ್ರಭೂ, ನಮ್ಮ ಕೋಶಾಧಿಕಾರಿ ಪೀತಾಂಬರನು ನನ್ನ ಮಾತನ್ನು ಮೀರಿದ್ದಾನೆ: ತನಗೆ ಕೆಲಸದ ಒತ್ತಡ ಹೆಚ್ಚಾದುದರಿಂದ, ಇಬ್ಬರು ಸಹಾಯಕರನ್ನು ನಿಯಮಿಸಬೇಕೆಂದು ನನ್ನ ಅನುಮತಿ ಕೇಳಿದನು. ಈಗ ಮೂವರಿಗೆ ಆ ಉದ್ಯೋಗವನ್ನು ಕೊಟ್ಟಿದ್ದಾನೆ" ಎಂದು ಹೇಳಿದನು.

"ಹೌದು, ಇದು ನಿಮ್ಮ ಆಜ್ಞೆಯನ್ನು ಉಲ್ಲಂಘಿಸುವುದೇ ನಿಜ. ಸರಿಯಾದ ಪದ್ಧತಿಯಲ್ಲ. ಇದನ್ನು ವಿಚಾರಿಸದೆ ಸುಮ್ಮನೆ ಬಿಡುವುದೂ ಸರಿಯಲ್ಲ." ಎಂದನು ಕನಕಗುಪ್ತ ರಾಜ.

ರಾಜನು ಕೋಶಾಧಿಕಾರಿ ಪೀತಾಂಬರನನ್ನು ಕರೆದು ಹಾಗೆ ಮಾಡಿದುದಕ್ಕೆ ಸಮಜಾಯಿಷಿ ಏನೆಂದು ಕೇಳಿದನು.

"ಪ್ರಭೂ, ಮಂತ್ರಿಯವರು ಇಬ್ಬರನ್ನು ಮಾತ್ರ ಉದ್ಯೋಗಕ್ಕೆ ತೆಗೆದುಕೊಂಡು ತಲಾ ಹನ್ನೆರಡು ವರಹ ಸಂಬಳ ಕೊಡಬೇಕೆಂದು ಹೇಳಿದುದು ವಾಸ್ತವ. ಆದರೆ ನಾನು ಎಂಟು ವರಹ ಸಂಬಳದ ಮೇಲೆ ಮೂವರಿಗೆ ಉದ್ಯೋಗ ಏರ್ಪಡಿಸಿ ಕೊಟ್ಟಿದ್ದೇನೆ. ಹೆಚ್ಚಿಗೆ ಸಂಬಳ ಹಣ ಹೋಗದಂತೆ ಮಾಡಿಕೊಂಡಿದ್ದೇನೆ. ಇದರಿಂದ ಖಜಾನೆಗೆ ನಷ್ಟವೇನೂ ಆಗಲಿಲ್ಲ." ಎಂದನು ಪೀತಾಂಬರ.

ಕಮಲಿನಿ

ರಾಜನು ಅವನನ್ನು ಕೋಪದಿಂದ ನೋಡುತ್ತ "ನೀನು ಹೀಗೆ ನಿನ್ನ ಇಷ್ಟಪ್ರಕಾರ ಏಕೆ ಮಾಡಿದಿ ಎಂಬುದನ್ನು ತಿಳಿಯಲಿಕ್ಕೇ ನಿನ್ನನ್ನು ಕರೆಯಿಸಿದ್ದು" ಎಂದನು.

ಪೀತಾಂಬರನು ಅತ್ಯಂತ ವಿನಯದಿಂದ, "ಈ ಉದ್ಯೋಗಗಳಿಗೆ ಮಂತ್ರಿಯವರೇ ಇಬ್ಬರನ್ನು ಕಳುಹಿಸಿದ್ದರು. ಆ ವ್ಯಕ್ತಿಗಳು ಯಾರೆಂದು ತಿಳಿದ ಮೇಲೆ ಮತ್ತೊಬ್ಬನು ಕೂಡಾ ಇದ್ದರೆ ಒಳ್ಳೆಯದೆಂದು ತೋರಿತು" ಎಂದನು.

ಆಗ ಮಂತ್ರಿ ನಡುವೆ ಬಾಯಿಹಾಕಿ, "ಹೌದು, ಪ್ರಭೂ, ನಾನು ಕಳುಹಿಸಿದ ಮನುಷ್ಯರು ತುಂಬಾ ನಂಬಿಗಸ್ಥರು. ಸಮರ್ಥ ಕೆಲಸಗಾರರು. ಆ ಕಾರಣದಿಂದಲೇ ಈ ಉದ್ಯೋಗ ನಿಯಮನ ವಿಷಯದಲ್ಲಿ ನಾನು ಸ್ವಲ್ಪ ಆಸಕ್ತಿ ತೋರಿಸಿದೆನು" ಎಂದನು.

"ಒಳ್ಳೆಯ ಕೆಲಸವೇ. ಧನಾಗಾರಕ್ಕೆ ಸಂಬಂಧಪಟ್ಟ ಕೆಲಸವಾದುದರಿಂದ ನಿಮ್ಮ ಆಸಕ್ತಿ ಮೆಚ್ಚತಕ್ಕದ್ದೇ. ಕೋಶಾಗಾರದಲ್ಲಿ ಕೆಲಸ ಮಾಡುವವರು ಪ್ರಾಮಾಣಿಕರಾಗಿ ನಂಬಿಗಸ್ಥರಾಗಿ ಸಮರ್ಥರಾಗಿ ಇರಲೇಬೇಕು." ಎಂದು ಕನಕಗುಪ್ತ ರಾಜನು ಪೀತಾಂಬರನನ್ನು ನೋಡಿದನು.

"ಪ್ರಭೂ, ಮಂತ್ರಿಯವರು ಉದ್ಯೋಗಕ್ಕೆ ಕಳುಹಿಸಿದವರಲ್ಲಿ ಒಬ್ಬರು ಅವರ ಸ್ನೇಹಿತರ ಮಗ. ಮತ್ತೊಬ್ಬರು ಮಹಾರಾಣಿಯವರ ದೂರದ ಬಂಧು" ಎಂದನು ಪೀತಾಂಬರ.

ಆ ಮಾತು ಕೇಳಿ ರಾಜನು ಸಣ್ಣಗೆ ನಕ್ಕು, "ಅಂದರೆ ಅಂಥವರು ಕೋಶಾಗಾರದಲ್ಲಿ ಈ ಸಣ್ಣ ಉದ್ಯೋಗಗಳಿಗೆ ಅರ್ಹರಲ್ಲವೆಂದು ನಿನ್ನ ಉದ್ದೇಶವೇನು ?" ಎಂದು ಕೇಳಿದನು.

"ಇದು ಅರ್ಹತೆಯ ಸಮಸ್ಯೆಯಲ್ಲವೆಂದು ನನಗೆ ತೋರಿತು ಪ್ರಭೂ. ಅಂತಹ ಪ್ರಭಾವಶಾಲಿಗಳಾದವರಿಂದ ನಾನು ಮೈಬಾಗಿಸಿ ಕೆಲಸ ಮಾಡಿಸುವುದು ಬಹಳ ಕಷ್ಟ. ಆದಕ್ಕಾಗಿ ಮತ್ತೊಬ್ಬ ಸಾಮಾನ್ಯನನ್ನು ಕೂಡಾ ಕೆಲಸಕ್ಕೆ ತೆಗೆದುಕೊಂಡೆನು. ಅಗತ್ಯ ಬಿದ್ದರೆ ಅವರಿಬ್ಬರ ಕೆಲಸ ಅವನಿಂದ ಮಾಡಿಸಿಕೊಳ್ಳಬಹುದೆಂದು ಹಾಗೆ ಮಾಡಿದೆನು. ಆದರೂ ಮಂತ್ರಿಯವರು ಹೇಳಿದ ಪ್ರಕಾರವೇ ಹೆಚ್ಚಿನ ವ್ಯಯವಾಗದಂತೆ ಜಾಗ್ರತೆ ವಹಿಸಿದ್ದೇನೆ" ಎಂದನು ಪೀತಾಂಬರ.

ರಾಜನು ಮಂತ್ರಿಯ ಮುಖ ನೋಡಿದನು. ಮಂತ್ರಿ ಏನೂ ಹೇಳದೆ ತಲೆತಗ್ಗಿಸಿ ಸುಮ್ಮನಿದ್ದನು.

ಆಮೇಲೆ ಕನಕಗುಪ್ತ ರಾಜನು, ಆಗಬೇಕಾದ ಕೆಲಸಗಳ ಅಗತ್ಯವನ್ನು ದೃಷ್ಟಿಯಲ್ಲಿಟ್ಟುಕೊಂಡು, ಯಾವ ಬಗೆಯ ಆಶ್ರಿತ ಪಕ್ಷಪಾತವೇನೂ ಇಲ್ಲದೆ, ಅರ್ಹತೆಯುಳ್ಳವರಿಗಷ್ಟೇ ಉದ್ಯೋಗಗಳನ್ನು ಕೊಡಬೇಕೆಂದು ಶಾಸನವನ್ನು ಜಾರಿಗೆ ತಂದನು.





# ಮಾತಿನ ತೂಕ

ಒಂದು ಊರಿನಲ್ಲಿ ವಿಮಲ ಎಂಬ ಕನ್ಯೆಗೆ ವಿವಾಹವಾಯಿತು. ಅತ್ತೆಯ ಮನೆಗೆ ಅವಳ ಗೃಹಪ್ರವೇಶವೂ ಆಯಿತು. ಬಂದ ಕೆಲವೇ ದಿನಗಳಲ್ಲಿ ತನ್ನ ಗಂಡ ಆದಿತ್ಯನು ಬಹಳ ವಾಚಾಳಿ ಎಂದು ವಿಮಲೆಗೆ ತಿಳಿಯಿತು. ಅವನು ಪ್ರತಿ ಸ್ವಲ್ಪ ವಿಷಯಕ್ಕೆ ಕೂಡಾ ಹೆಚ್ಚಾಗಿಯೇ ಮಾತಾಡುವುದು ಅವಳಿಗೆ ಹಿಡಿಸುತ್ತಿರಲಿಲ್ಲ. ಅವನು ಅಷ್ಟೆಲ್ಲ ವಿವರಿಸಿ ಹೇಳುವುದು ಅವಳಿಗೆ ರಗಳೆಯಾಗಿ ರೇಗಿಸುತ್ತಿತ್ತು. ಹಾಗೆ ಹೇಳಬೇಡಿರೆಂದು ಮೊದಲು ಮೃದುವಾಗಿಯೂ ಆಮೇಲೆ ಕಟುವಾಗಿಯೂ ಹೇಳಿ ನೋಡಿದಳು. ಆದರೂ ಆದಿತ್ಯನಲ್ಲಿ ಯಾವ ಬದಲಾವಣೆಯೂ ಬರಲಿಲ್ಲ. ಹೀಗಾಗಿ ವಿಮಲೆ ಪಂಥ ಕಟ್ಟಿಕೊಂಡವಳ ಹಾಗೆ ಗಂಡನೊಂದಿಗೆ ಮಾತ್ರವಲ್ಲ, ಪರಿಚಯಸ್ಥರೊಂದಿಗೆ ಕೂಡಾ, ಹೌದು ಅಲ್ಲ ಎನ್ನುವುದರ ಹೊರತು ಹೆಚ್ಚು ಮಾತಾಡುವುದನ್ನು ಬಿಟ್ಟಳು.

ಹೀಗಿರುವಾಗ ಒಂದು ಸಾರಿ ವಿಮಲೆಯ ಸ್ನೇಹಿತೆಯೊಬ್ಬಳಿಗೆ ನಗರದಲ್ಲಿ ಮದುವೆ. ವಿಮಲೆ ಆ ಮದುವೆಗೆ ಹೋಗಬೇಕಾಗಿ ಬಂತು. ಈ ಸಣ್ಣ ಸಂಗತಿಯನ್ನು ತಿಳಿದು ಆದಿತ್ಯನು "ಹೌದಲ್ಲ! ಅಗತ್ಯ ಹೋಗಿಬರಬೇಕಾದ್ದೇ. ಸ್ನೇಹಬಂಧವೆಂದರೆ ಎಲ್ಲಾ ಬಂಧಗಳಿಗಿಂತಲೂ ಬಲವಾದುದು ಗೊತ್ತಾ ? ನಿಜವಾದ ಸ್ನೇಹಿತರ ನಡುವೆ ಸ್ವಾರ್ಥವೇ ಇರಲಾರದು. ಬಂಧು ಬಳಗ ಇಂಥವರೆಲ್ಲಾ ಸ್ವಾರ್ಥಿಗಳೇ. ರಣಹದ್ದುಗಳಿಗಿಂತಲೂ ಕ್ರೂರರು. ಬದುಕಿರುವಾಗಲೇ ಕುಕ್ಕಿ ತಿನ್ನುವವರು. ನಿಜಕ್ಕೂ ಕಷ್ಟಕ್ಕೆ ಸಹಾಯ ಮಾಡುವವರು ಸ್ನೇಹಿತರೇ. ಮದುವೆ ಅಂದರೆ ಜೀವಿತದಲ್ಲೇ ಬಹು ಮುಖ್ಯವಾದುದು. ಸ್ನೇಹಿತೆಯ ಮದುವೆಗೆ ಹೋಗಬೇಕಾದುದು ಅತೀ ಅಗತ್ಯವೇ. ಹೋಗಿ ಬಾ" ಎಂದನು ಉಸಿರಿಗುಕ್ಕ್ಯಲವಿಲ್ಲದಂತೆ.

ವಿಮಲೆ ಮುಖ ಸಿಂಡರಿಸಿ "ಹೋಗಿ ಬಾ ಅಂತ ಒಂದು ಮಾತು ಹೇಳಲಿಕ್ಕೆ ಈ ಪುರಾಣವೆಲ್ಲಾ ಯಾಕೋ ?" ಎಂದು ಗೊಣಗಿಕೊಳ್ಳುತ್ತ ಸ್ನೇಹಿತೆಯ ಮದುವೆಗೆ ಹೊರಟಳು.

ಮದುವೆ ಮನೆಗೆ ಹೋದ ಮೇಲೆ ಅವಳು ತನ್ನ ಸ್ನೇಹಿತೆ ಮದುಮಗಳನ್ನು ಮಾತ್ರ ಮಾತಾಡಿಸಿ, ನಾಲ್ಕು ಮಂದಿಯೊಂದಿಗೆ ಸೇರದೆ, ಒಂದು ಕಡೆಯಲ್ಲಿ ಕುಳಿತು ಮದುವೆಯನ್ನು ನೋಡಿದಳು.

ಎಂ. ಕೆ. ಈಶ್ವರರಾವ್



ಯಾರಾದರೂ ಕೆಲಮಂದಿ ಪರಿಚಿತರು ಮಾತಾಡಿಸಿದರೆ ಹೂಂ, ಹಾಂ ಎಂದಷ್ಟೇ ಹೇಳಿ ಬಾಯಿ ಮುಚ್ಚಿಕೊಂಡಳು. ಅವಳಿಗೆ ಬಹಳ ಗರ್ವ ಬಂದಿದೆ ಎಂದು ಕೆಲವರು ಗುಸಗುಸ ಅಂದುಕೊಂಡರು. ಅಂತಹ ಕೆಲವು ಮಾತುಗಳು ಕಿವಿಗೆ ಬಿದ್ದರೂ ಅವಳೇನೂ ಹಚ್ಚಿಕೊಳ್ಳಲಿಲ್ಲ. ತಾನಾಗಿ ಯಾರೊಡನೆಯೂ ಮಾತಾಡಲು ಹೋಗಲೂ ಇಲ್ಲ.

ಊಟ ಉಪಚಾರಗಳೆಲ್ಲ ಆದಮೇಲೆ ಸ್ನೇಹಿತೆಯೊಂದಿಗೆ ಹೋಗುತ್ತೇನೆಂದು ಹೇಳಿ ಹೊರಟು, ನಾಲ್ಕು ಬೀದಿ ಸೇರುವಲ್ಲಿ ಬಾಡಿಗೆಯ ಗಾಡಿಗಾಗಿ ನಿಂತಳು. ಆಗ ಅವಳ ಊರಿನವಳಾದ ಪಕ್ಕದ ಮನೆಯ ಸುಂದರಮ್ಮನೂ, ಅವಳ ಗಂಡನೂ ಗಾಡಿಯಲ್ಲಿ ಹೋಗುವುದು ಕಂಡಿತು. ವಿಮಲೆ ಅವರನ್ನು ನೋಡಿಯೂ ನೋಡದವಳಂತೆ ಮುಖವನ್ನು ಬೇರೆ ಕಡೆಗೆ ತಿರುಗಿಸಿಕೊಂಡಳು. ಅದನ್ನು ಅವಮಾನವೆಂದು ಭಾವಿಸಿ ಸುಂದರಮ್ಮನೂ ಅವಳ ಗಂಡನೂ ತಮ್ಮ ಸುಮ್ಮನೆ ಪಾಡಿಗೆ ಹೊರಟುಹೋದರು. ವಿಮಲೆ ಎಷ್ಟು ಹೊತ್ತು ನಿಂತರೂ ಒಂದು ಗಾಡಿಯೂ ಬರುವುದು ಕಾಣಲಿಲ್ಲ. ಕಡೆಗೆ ಸಾಯಂಕಾಲದ ಹೊತ್ತಿನಲ್ಲಿ ಒಂದು ಖಾಲೀ ಗಾಡಿಯನ್ನು ಸಾಗಿಸಿಕೊಂಡು ಗಾಡಿಯವನೊಬ್ಬನು ಆ ಕಡೆಗೆ ಬಂದನು. ಅವನು ಮೊದಲು ಅವಳ ಊರಿಗೆ ಗಾಡಿ ಹೊಡೆಯಲು ಒಪ್ಪದಿದ್ದರೂ, ಅವಳು ಎರಡು ಪಾಲು ಬಾಡಿಗೆ ಕೊಡುವೆನೆಂದು ಹೇಳಿದ ಮೇಲೆ "ಸರಿ, ಹತ್ತಿಕೋ ಅಮ್ಮ" ಎಂದು ಹೇಳಿ ಅವಳನ್ನು ಏರಿಸಿಕೊಂಡನು.

ವಿಮಲೆ ಗಾಡಿಯಲ್ಲಿ ಸುಮಾರು ಅರ್ಧದೂರ ಪ್ರಯಾಣ ಮಾಡುವಷ್ಟರಲ್ಲಿ ಸೂರ್ಯನು ಮುಳುಗಿ ಕತ್ತಲೆ ಕವಿಯ ತೊಡಗಿತು. ಆ ದಾರಿಯಲ್ಲಿ ಜನ ಸಂಚಾರವೇನೂ ಕಾಣಲಿಲ್ಲ. ಸ್ವಲ್ಪದೂರ ಹೋಗುತ್ತ, ಚೆನ್ನಾಗಿ ಕತ್ತಲೆಯ ಹೊತ್ತಿನಲ್ಲಿ ಗಾಡಿಯವನು ಪಕ್ಕನೆ ಗಾಡಿಯನ್ನು ನಿಲ್ಲಿಸಿದನು.

ವಿಮಲೆ ಆತುರದಿಂದ, "ಏಕೆ ನಿಲ್ಲಿಸಿದೆಯಪ್ಪಾ? ಏನಾಯಿತು?" ಎಂದಳು.

"ಇನ್ನೂ ಏನೂ ಆಗಲಿಲ್ಲ. ಈಗ ಆಗುತ್ತೆ. ನೀನು ಮರ್ಯಾದೆಯಾಗಿ ನಿನ್ನ ಹತ್ತಿರವಿದ್ದ ಹಣ, ಕೊರಳಲ್ಲಿರುವ ಸರ ಒಳ್ಳೇ ಮಾತಿನಲ್ಲಿ ಕೊಟ್ಟು ಬಿಡು, ಇಲ್ಲದಿದ್ದರೆ..." ಎನ್ನುತ್ತ ಚಿಕ್ಕದೊಂದು ಚೂರಿಯನ್ನು ಸೊಂಟದೆಡೆಯಿಂದ ತೆಗೆದನು.

ವಿಮಲೆಯ ಬಾಯಿಯಿಂದ ಮಾತೇ ಹೊರಡಲಿಲ್ಲ. ಅವಳು ಗಡಗಡ ನಡುಗುತ್ತ, ಬೇಗ ಬೇಗ ಗಾಡಿಯಿಂದ ಇಳಿದು, ತನ್ನ ಹತ್ತಿರವಿದ್ದ ನೂರು ರೂಪಾಯಿ ತೆಗೆದು ಗಾಡಿಯವನಿಗೆ ಕೊಟ್ಟಳು.

"ಕುತ್ತಿಗೇದೂ ತೆಗೆದುಕೊಡು, ಬೇಗಬೇಗ!" ಎಂದನು ಗಾಡಿಯವನು ಗಡುಸು ದನಿಯಿಂದ.

ಅವಳು ಕಣ್ಣೀರು ತುಂಬಿಕೊಂಡು ಕುತ್ತಿಗೆಯಿಂದ ಸರವನ್ನು ತೆಗೆಯುತ್ತಾ ಇರುವಾಗ, ತುಸು ದೂರದಲ್ಲಿ

ನಗರದ ಕಡೆಗೆ ಹೋಗುವ ಗಾಡಿಯೊಂದು ಆ ಕಡೆಗೆ ವೇಗವಾಗಿ ಬರುವುದು ಕಾಣಿಸಿತು.

ಕೂಡಲೇ ಕಳ್ಳ ಗಾಡಿಯವನು ವಿಮಲೆಯ ಕೊರಳಿಗೆ ಕೈ ಹಾಕಿ ಸರವನ್ನು ಗಟ್ಟಿಯಾಗಿ ಎಳೆದನು. ಆ ಸರವು ಬಹಳ ಸಪುರವಾಗಿದ್ದುದರಿಂದ ತುಂಡಾಗಿ ಸೆರಗಿಗೆ ಸಿಕ್ಕಿಕೊಂಡು ನೆಲಕ್ಕೆ ಬಿದ್ದಿತು.

ಕತ್ತಲೆಯಲ್ಲಿ ಅದು ಕಾಣದೆ, ಹುಡುಕಿ ತೆಗೆಯಲು ಧೈರ್ಯ ಸಾಲದೆ, ಎತ್ತನ್ನು ಹೊರಡಿಸಿಕೊಂಡು ಗಾಡಿಯವನು ನಗರದ ಕಡೆಗೆ ಗಾಡಿಯನ್ನು ತಿರುಗಿಸಿ ಹೋಗಿಬಿಟ್ಟನು.

ವಿಮಲೆ ಕೆಳಗೆ ಬಿದ್ದ ಸರವನ್ನು ತೆಗೆದು ಸೆರಗಿನಲ್ಲಿ ಕಟ್ಟಿಕೊಂಡು ಕಾಲುನಡಿಗೆಯಿಂದಲೇ ತನ್ನ ಊರಿಗೆ ಹೋಗಿ ತಲಪಿದಳು.

ಅವಳ ಸಂಗತಿಯನ್ನೆಲ್ಲ ತಿಳಿದ ಆದಿತ್ಯನು ತುಂಬಾ ತಳಮಳಗೊಳ್ಳುತ್ತ, "ಎಂಥಾ ಬುದ್ಧಿಯಿಲ್ಲದ ಕೆಲಸ! ಆ ಸುಂದರಮ್ಮನೊಂದಿಗೆ ಮಾತಾಡಿ ಅವರೊಂದಿಗೆ ಬರಬಹುದಿತ್ತು. ಜತೆಯವರೊಂದಿಗೆ ಗಾಡಿಯಲ್ಲಿ ಹಗಲು ಹೊತ್ತಿರುವಾಗಲೇ ಮನೆಗೆ ಬರುತ್ತಿದ್ದಿ. ಹೆಣ್ಣಾದವಳನ್ನು ಒಬ್ಬಳೇ ಹೋಗುವಂತೆ ಕಳಿಸಿದ್ದು ನನ್ನ ಮೊದಲನೇ ತಪ್ಪು, ನೂರು ರೂಪಾಯಿ ನಿನ್ನ ಕೈಯಲ್ಲಿ ಕೊಟ್ಟದ್ದು ನನ್ನ ಎರಡನೇ ತಪ್ಪು. ಬಂಗಾರದ ಸರಮಾಡಿಸಿ ನಿನ್ನ ಕೊರಳಿಗೆ ಹಾಕಿದ್ದು ಮೂರನೇ ತಪ್ಪು. ನಗರಕ್ಕೆ ಹೋಗುವವಳಾಯಿತಲ್ಲಾ, ಏನಾದರೂ ಅಪರೂಪ ವಸ್ತು ಸಿಕ್ಕಿದರೆ ತೆಗೆದುಕೊಳ್ಳಲಿಕ್ಕೆ ಇರಲೀ ಅಂತ ನೂರು ರೂಪಾಯಿ ಕೊಟ್ಟೆ..." ಎಂದು ಅವನು ಇನ್ನೂ ಏನೋ ಹೇಳಲಿಕ್ಕಿದ್ದನು.

ಆ ಸಮಯದಲ್ಲಿ ಕೆಲಸದವಳು ರಂಗಮ್ಮ ಬಂದುದನ್ನು ನೋಡಿ ವಿಮಲೆ ಗಂಡನ ಮಾತಿಗೆ ಅಡ್ಡ ಬಂದು, "ಸದ್ಯ ಸಾಕಪ್ಪ ನಿಮ್ಮ ತಪ್ಪುಗಳ ದಂಡಕ! ಇನ್ನೊಂದು ಸಾರಿ ನಿಧಾನವಾಗಿ ಹೇಳಿರಿ. ಆದದ್ದಾಯಿತು. ಈಗ ಈ ಮುರಿದ ಸರವನ್ನು ತೆಗೆದುಕೊಂಡು ಹೋಗಿ ಸರಿಮಾಡಿ ತನ್ನಿರಿ" ಎಂದಳು. ಆದಿತ್ಯನು ಅದೇ ಗ್ರಾಮದಲ್ಲಿರುವ ದೊಡ್ಡ





ದೊಂದು ನಗಗಳ ಅಂಗಡಿಯಲ್ಲಿ ಕೆಲಸಮಾಡುವವನು. ನೂರು ರೂಪಾಯಿ ಕಳೆದು ಹೋದುದರಿಂದ ಆ ದಿನವಿಡೀ ಅವನಿಗೆ ಮನಸ್ಸೇ ಸರಿಯಾಗಿರಲಿಲ್ಲ. ಅಂಗಡಿಗೆ ಹೊರಡುವಾಗ ಸರವನ್ನು ತೆಗೆದುಕೊಂಡು ಹೋಗಲು ಮರೆತನು.

ಆ ದಿನ ಬಟ್ಟತಲೆಯ ಮನುಷ್ಯನೊಬ್ಬನು ಯಾವುದೋ ನಗಗಳನ್ನು ಕೊಂಡುಕೊಳ್ಳಲು ಆ ಅಂಗಡಿಗೆ ಬಂದನು. ಆದಿತ್ಯನು ತೋರಿಸಿದ ಕೆಲವು ನಗಗಳನ್ನು ನೋಡಿದ ಮೇಲೆ, ಬೇರೆ ನಮೂನೆಯ ಸರಗಳಿದ್ದರೆ ತೋರಿಸುವಂತೆ ಹೇಳಿದನು.

ಆದಿತ್ಯನು ಅವನಿಗೆ ಬಗೆಬಗೆಯ ಸರಗಳನ್ನು ತೋರಿಸುತ್ತ ಅವುಗಳ ಕೆಲಸಗಾರಿಕೆಯನ್ನು, ನಾಜೂಕುತನವನ್ನು ವರ್ಣಿಸುತ್ತ ಮಾತಾಡಿದನು.

ಬಟ್ಟತಲೆಯವನು ತಲೆಯಾಡಿಸುತ್ತ, "ನಾನೇನು ಕುರುಡನೆಂದುಕೊಂಡಿರಾ ? ಇವುಗಳನ್ನು ಕುರಿತು ಅಷ್ಟೆಲ್ಲಾ ವರ್ಣಿಸಿ ವರ್ಣಿಸಿ ಹೇಳಬೇಕಾಗಿಲ್ಲ. ಎಲ್ಲವೂ ದಪ್ಪಗೆ ಮೊರಟಾಗೇ ಇವೆ. ಸಣ್ಣಗಿನ ನಾಜೂಕು ಸರಗಳು ನಿಮ್ಮ ಅಂಗಡೀಲಿ ಇಲ್ಲವೇನು ?" ಎಂದನು.

ಅನೇಕ ನಗಗಳನ್ನು ತೆಗೆಸಿ ನೋಡಿ ನೋಡಿ ಹಿಡಿಸಿಲ್ಲವೆಂದು ಅವನು ಹೇಳಿದಾಗ, ಆದಿತ್ಯನು ಸ್ವಲ್ಪ ಕೋಪದಿಂದ, "ನೀವೇನೂ ಬೇಸರಪಡಬೇಡಿ. ನಿಜ ನೋಡಿದರೆ ಅನುಭವಜ್ಞಾನ ಸ್ವಲ್ಪ ಕಡಿಮೆಯಿದ್ದವರೇ ಸಣ್ಣಗಿನ ನಾಜೂಕು ನಗ ಕೊಂಡುಕೊಳ್ತಾರೆ. ಏಕೆ ಹೇಳ್ತೀನೇ ಅಂದರೆ" ಎಂದು ತನ್ನ ಹೆಂಡತಿ ಕಳೆದುಕೊಂಡ ಸಣ್ಣಗಿನ ಸರದ ಸಂಗತಿಯನ್ನು ಹೇಳಿ, "ಆ ಸರ ಸಪೂರವಾಗಿ ನಾಜೂಕಾಗಿದ್ದುದರಿಂದಲೇ ಆ ಕಳ್ಳಭಂಡ ಮುಟ್ಟಿದ ಕೂಡಲೇ ತುಂಡಾಗಿ ಹೋಯಿತು. ನನ್ನವಳು ಅದನ್ನು ಸರಿಮಾಡಿ ತನ್ನೀ ಅಂದಳು. ಅಂಗಡಿಗೆ ಹೊರಡುವ ಅವಸರದಲ್ಲಿ ಮನೆಯಲ್ಲೇ ಬಿಟ್ಟುಬಂದೆ. ಮನೆಗೆ ಇಲ್ಲಿಂದ ಅರ್ಧ ಮೈಲು ನಡೀಬೇಕು, ಆ ಎಮ್ಮೇ ಕೆರೆಯ ಆಚೆಗಿನ ಶಾಲೆಯ ಹಿಂದೆ ನನ್ನ ಮನೆ. ಇನ್ನು ನಾಳೆ ಆಯಿತಷ್ಟೇ. ಇಲ್ಲದಿರುತ್ತಿದ್ದರೆ ಅದನ್ನು ನಿಮಗೆ ತೋರಿಸುತ್ತಿದ್ದೆ" ಎಂದನು.

ಬಟ್ಟತಲೆಯವನು ಆ ಹರಟೆಗೆ ಮೋರೆ ಕಿನಿಸಿಕೊಂಡು, "ದಾರೀದೋಚುವ ಕಳ್ಳರಿಗೆ ದಪ್ಪದ ಸರಗಳು ಒಳ್ಳೆ ಗಮ್ಮತ್ತಾಗಿಯೇ ಇದ್ದೀತು. ನಿಮ್ಮ ಅಂಗಡಿಯಲ್ಲಿ ನನಗೆ ಬೇಕಾದ್ದು ಇಲ್ಲದಿದ್ದರೆ ಅಷ್ಟೇ ಹೇಳಿ. ಪುರಾಣಕತೆ ಏಕೆ ?" ಎಂದು ಹೇಳಿ ಹೊರಟು ಹೋದನು.

ಆ ದಿನ ಸಾಯಂಕಾಲ ಆದಿತ್ಯನು ಮನೆಗೆ ಹೋದ ಕೂಡಲೇ, ವಿಮಲೆ, "ಸರ ಸರಿಮಾಡಿ ತಂದಿರಾ ?" ಎಂದು ಕೇಳಿದಳು.

"ಅಸಲು ತೆಗೆದುಕೊಂಡು ಹೋಗಿದ್ದರೆ ತಾನೇ ? ಇಲ್ಲೇ ಬಿಟ್ಟು ಹೋಗಿಬಿಟ್ಟೆನು. ನಾಳೆ ಅಂಗಡಿಗೆ ಹೊರಡುವಾಗ ಸ್ವಲ್ಪ ನೆನಪು ಮಾಡು" ಎಂದನು ಆದಿತ್ಯ. ವಿಮಲೆ ಗಾಬರಿಯಾಗಿ, "ಸರ ನಿಮಗೆ ಸಿಗ

ಲಿಲ್ಲವೇ ? ಅವನು ತಂದುಕೊಡಲಿಲ್ಲವೆ ? " ಎಂದಳು.

" ಅವನಾ ? ಯಾರವನು ? " ಎಂದು ಬಾಯಿ ತೆರೆದನು ಆದಿತ್ಯ.

ನಡೆದುದೇನೆಂದರೆ, ಮಧ್ಯಾಹ್ನದ ವೇಳೆಯಲ್ಲಿ ಬಟ್ಟತಲೆಯವನೊಬ್ಬ ಆದಿತ್ಯನ ಮನೆಗೆ ಬಂದು, ವಿಮಲೆ ಬಾಗಿಲು ತೆರೆದ ಕೂಡಲೇ, " ಬೆಳಿಗ್ಗೆ ಹೋಗುವಾಗ ನಿಮ್ಮ ಯಜಮಾನರು ಒಂದು ಮುರಿದ ಸರ ತೆಗೆದುಕೊಂಡು ಹೋಗಲು ಮರೆತ ರಂತೆ. ಅದನ್ನು ತೆಗೆದುಕೊಂಡು ಬರಲಿಕ್ಕೆ ನನ್ನನ್ನು ಕಳಿಸಿದ್ದಾರೆ, ಒಳ್ಳೇ ವೇಳೆ ! ಆ ಕಳ್ಳ ಗಾಡಿಯವ ನಿಂದ ನಿಮಗೇನೂ ಪೆಟ್ಟಾಗಲಿಲ್ಲವಲ್ಲ ? " ಎಂದನು.

ಹೀಗೆ ಆ ಬಂದವನು ನಡೆದ ಸಂಗತಿಯನ್ನೆಲ್ಲಾ ಹೇಳಿದುದರಿಂದ, ವಿಮಲೆಗೆ ಅವನ ಮೇಲೆ ಸ್ವಲ್ಪವೂ ಸಂದೇಹ ಬಾರದೆ ಸರವನ್ನು ತಂದು ಅವನ ಕೈಗೆ ಕೊಟ್ಟಳು.

" ಎಲೆಲಾ ! ಯಾವನೋ ಬಟ್ಟತಲೆಯ ಮನುಷ್ಯ ಗಿರಾಕಿಯಾಗಿ ಬಂದವನ ಹತ್ತಿರ ಆ ಸಮಾಚಾರ ವನ್ನೆಲ್ಲ ಹೇಳಿದೆ. ಅವನು ಇಷ್ಟು ದೊಡ್ಡ ಕಳ್ಳಾ ಅಂತ ನಾನೇನು ಕಂಡೆ ? " ಎಂದನು ಆದಿತ್ಯ ಬೆಪ್ಪು ಬೆರಗನಾಗಿ.

" ಮತ್ತೆ ನೀವು ಕಂಡಕಂಡವರ ಹತ್ತಿರವೆಲ್ಲ ಮನೆಯ ಸಮಾಚಾರ ಹೇಳಿ ಇಷ್ಟೆಲ್ಲ ನಷ್ಟಕ್ಕೆ ಕಾರಣ ರಾದಿರಿ. ನಿಮ್ಮ ಅತಿಮಾತಿನ ಅಭ್ಯಾಸವೇ ಇಷ್ಟೆಲ್ಲಾ ಕಷ್ಟಗಳಿಗೆ ಮೂಲವಾಯ್ತು ! " ಎಂದಳು ವಿಮಲೆ.

" ನೀನು ಮಾತ್ರ ಏನಂತೆ ? ಮಾತೇ ಇಲ್ಲದ ಗುಮ್ಮೇ ಹಾಗಾಗಿ ಸೊತ್ತು ಕಳೆದುಕೊಂಡವಳೇ ! " ಎಂದನು ಆದಿತ್ಯ.

ಆ ಸಮಯಕ್ಕೆ ಆ ಕಡೆಗೆ ಬಂದ ಕೆಲಸದವಳು ರಂಗಮ್ಮ ಅವರೊಂದಿಗೆ, " ನಾನೊಂದು ಹೇಳು ತ್ತೇನೆ, ನೀವಿಬ್ಬರೂ ಕೋಪ ಮಾಡಬಾರದು. ಅಮ್ಮಾವರು ತೀರಾ ಮಾತು ಕಮ್ಮಿ ಮಾಡಿ ನೂರು ರೂಪಾಯಿ ಕಳೆದುಕೊಂಡಿರಾ ? ಅಯ್ಯಾ ಅವರು ಹೆಚ್ಚಿಗೆ ಮಾತಾಡಿ ಸರ ಹೋಗಲು ಕಾರಣರಾದರಾ ? ಅಮ್ಮಾ ಅವರು ಹೆಚ್ಚು ಮಾತಾಡುವುದಿಲ್ಲ ಅಂತಲೇ ನಾನೂ ಕೆಲಸಕ್ಕೆ ಸೇರಿದೇ ಅನ್ನಿ. ನಾನೂ ಅಮ್ಮ ನಿಗೆ ಹಿಡಿಸದು ಅಂತ ಹೆಚ್ಚು ಮಾತಾಡೋದಿಲ್ಲ. ಯಾರು ಯಾರಿಗೆ ಯಾವ ಸಮಯದಲ್ಲಿ ಎಷ್ಟು ಮಾತಾಡಿದರೆ ಸಾಕೋ ಅಷ್ಟೇ ಮಾತಾಡಬೇಕು. ಮಾತು ಅಂದರೆ ಅತಿಯೂ ಅಲ್ಲದೆ, ತೀರಾ ಮಿತವೂ ಅಲ್ಲದೆ ಸಮತೂಕವಾಗಿರಬೇಕು ಅಂತ ನನಗೆ ಕಾಣುತ್ತೆ ! " ಎಂದಳು.

ರಂಗಮ್ಮ ಓದಿಕೊಂಡವಳಲ್ಲದಿದ್ದರೂ ಅವಳ ಅನುಭವದ ಮಾತು ಸರಿ ಎಂದು ಆ ಗಂಡ ಹೆಂಡಿರಿಗೆ ತೋರಿತು.





# ತುಂಟಯುವರಾಜ

ಬ್ರಹ್ಮದತ್ತನು ಕಾಶೀರಾಜ್ಯಕ್ಕೆ ರಾಜನಾಗಿ ಬರುವ ಮೊದಲು ಬೋಧಿಸತ್ವನು ದೇವತೆಗಳಿಗೆ ಅಧಿಪತಿಯಾದ ದೇವೇಂದ್ರನ ಪದವಿಯನ್ನು ವಹಿಸಿಕೊಂಡಿದ್ದನು.

ಆಗ ತಾನೇ ತಾರುಣ್ಯಕ್ಕೆ ಕಾಲಿಟ್ಟ ರಾಜಕುಮಾರನಾದ ಬ್ರಹ್ಮದತ್ತನು ಹುಡುಗಾಟದ ಬುದ್ಧಿಯೊಂದಿಗೆ ಅಧಿಕಾರವೂ ಸೇರಿ, ಯೌವನದ ಮದದೊಂದಿಗೆ ದೇವರನ್ನೇ ಲೆಕ್ಕಕ್ಕೆ ತಾರದೆ ಸ್ವೇಚ್ಛಾರಿಯಾಗಿದ್ದನು. ಮಾನವರೆಂದರೆ ಅವನಿಗೆ ಲಕ್ಷ್ಯವೇ ಇರಲಿಲ್ಲ. ಮನುಷ್ಯರಾದರೂ, ಪ್ರಾಣಿಗಳಾದರೂ ಯಾರೂ ಯಾವುದೂ ತನಗೆ ಸರಿಸಮವಲ್ಲವೆಂಬ ಭಾವನೆಯಿಂದ ತಿರಸ್ಕಾರವೇ ಮೂರ್ತಿಮಂತನಾದವನಂತೆ ಕಾಣುತ್ತಿದ್ದನು.

ವಯಸ್ಸು ಮೀರಿದ ಕುದುರೆಗಳೋ, ಆನೆಗಳೋ ಇನ್ನಾವುದೇ ಆಗಲಿ, ಅವನ ಕಣ್ಣಿಗೆ ಬಿದ್ದರೆ ಅವುಗಳ ಮೇಲೆ ಹೇಸಿ ರೋಸಿ ಓಡಿಸಿ ಓಡಿಸಿ ಹೊಡೆಯುತ್ತಿದ್ದನು, ಹಳೆಯ ಗಾಡಿಗಳೋ, ಪೆಟ್ಟಿಗೆಗಳೋ, ಆಸನಗಳೋ ಕಂಡರೆ ಅವನ್ನೆಲ್ಲ ಪುಡಿ ಪುಡಿ ಮಾಡಿ ದೂರ ಬಿಸುಡುವನು.

ವಯಸ್ಸುಮೀರಿದ ಮನುಷ್ಯರು ಅವನ ಇದಿರಾಗಿ ಹೋದರೆ, ಅವರನ್ನು ಹೀನಾಯವಾಗಿ ಬಯ್ಯುತ್ತ, ನರೆತ ಗಡ್ಡ ಮೀಸೆ ಕೂದಲುಗಳನ್ನು ಹಿಡಿದು ಎಳೆದು ಪೀಡಿಸುವನು. ಅವರನ್ನು ಪಾತ್ರವನ್ನು ಬೋರ್ಲಿಸಿದ ಹಾಗೆ ಕೆಳಗೆ ಹೊರಳಿಸಿ ನಗುವನು. ವೃದ್ಧ ಸ್ತ್ರೀಯರನ್ನು ಕಂಡರೂ ಇದೇ ಹಾಡು. ಅವನ ತಲೆ ಕಂಡರೆ ಸಾಕು ಜನರೆಲ್ಲಾ ದೂರ ದೂರ ಮರೆಯಾಗುತ್ತಿದ್ದರು. ಸಾಧುಸಜ್ಜನರೂ, ದೀನದಲಿತರೂ ಅವನ ಹೆಸರು ಕೇಳಿದರೆ ಸಾಕು. ಹೆದರಿ ನಡುಗಿ ಸಾಯುವಂತಾಯಿತು.

ಬ್ರಹ್ಮದತ್ತನು ಮಾಡುವ ಈ ಅರ್ಥವಿಲ್ಲದ ಆಟಗಳಿಗೂ, ತುಂಟ ತನಗಳಿಗೂ ಮಿತಿಮೀರೆ ಇಲ್ಲದೆ ಹೋಯಿತು. ಇಂದ್ರನನ್ನೂ ಚಂದ್ರನನ್ನೂ ಲಕ್ಷ್ಯ ಮಾಡದೆ ಓಡಾಡಿಕೊಂಡಿರುವ ಆ ರಾಜಕುಮಾರನನ್ನು, ಇದಿರಿಸುವವರೋ, ಖಂಡಿಸಿ ಬುದ್ಧಿ ಹೇಳುವವರೋ ಯಾರೂ ಇಲ್ಲದೆ ಹೋದರು.

ರಾಕ್ಷಸನ ಹಾಗಾದ ರಾಜಕುಮಾರನ ಹಾವಳಿಗಳಿಂದ ಪ್ರಜೆಗಳು ಯಾತನೆ ಪಡತೊಡಗಿದರು. ರಾಜಕುಮಾರನ ಕಾಟವನ್ನು ಕುರಿತು ರಾಜನ ಹತ್ತಿರ

ದೂರು ಹೇಳಲು ಹೆದರಿ ಬಾಯಿಬಾರದೆ, ಅಲ್ಲಲ್ಲೇ ಮುದುಡಿಕೊಂಡಿದ್ದರು. ವೃದ್ಧರಾದ ತಮ್ಮ ತಾಯಿ ತಂದೆಯರನ್ನು ಆ ರಾಜ್ಯದ ಹೊರಗಿನ ಬೇರೆ ಪ್ರದೇಶಗಳಿಗೆ ಕಳುಹಿಸಿದರು. ಹೀಗೆ ತಂದೆತಾಯಿಗಳನ್ನು ದೂರ ದೇಶದಲ್ಲಿ ಬಿಟ್ಟುದರಿಂದ ಅವರನ್ನು ರಕ್ಷಿಸಲಾರದೆ ಹೋದೆವಲ್ಲಾ ಎಂಬ ಚಿಂತೆಯಿಂದ ಕಣ್ಣೀರಿನ ಅನ್ನ ತಿಂದುಕೊಂಡು ಹೇಗೋ ಇರಬೇಕಾಯಿತು ಸಾಧಾರಣ ಪ್ರಜೆಗಳು.

ಇದರಿಂದ ಇನ್ನೊಂದು ಕೇಡೂ ಬಂದಿತು. ಜನರು ತಮ್ಮ ತಂದೆತಾಯಂದಿರನ್ನು ದಿಕ್ಕುದೆಸೆ ತಿಳಿಯದಲ್ಲಿ ಬಿಟ್ಟು ಬಂದುದರಿಂದ ಪಾಪಗಳು ಅವರನ್ನು ಸುತ್ತಿಕೊಂಡವು. ಹೀಗೆ ಪಾಪಾತ್ಮರಾಗಿ ಸತ್ತವರಿಂದ ರೌರವಾದಿ ನರಕಗಳೆಲ್ಲಾ ತುಂಬಿಹೋದುವು. ಸ್ವರ್ಗಕ್ಕೆ ಹೋಗುವ ಪುಣ್ಯವಂತರಿಲ್ಲದೆ ಸ್ವರ್ಗ ಖಾಲಿಯಾಗಿ ಭಣಗುಟ್ಟತೊಡಗಿತು.



ಸ್ವರ್ಗದ ಉದ್ಯೋಗಸ್ಥರಾರಿಗೂ ತಕ್ಕಷ್ಟು ಕೆಲಸಗಳಿಲ್ಲದೆ ಸೋಮಾರಿಗಳಾಗುವುದನ್ನು ನೋಡಿ, ದೇವೇಂದ್ರನಾದ ಬೋಧಿಸತ್ವನಿಗೆ ಕಳವಳವೆದ್ದಿತು. ಏನು ಮಾಡುವುದೆಂದು ಆಲೋಚನೆ ಮಾಡಿ, ಕಡೆಗೊಂದು ಉಪಾಯ ತೆಗೆದನು.

ದೇವೇಂದ್ರನು ಶತದರಿದ್ರನಾದ ಮುದುಕನೊಬ್ಬನ ರೂಪ ತಾಳಿದನು. ಆ ವೃದ್ಧನು ಎರಡು ಜಾಡಿಗಳಲ್ಲಿ ಮಜ್ಜಿಗೆ ತುಂಬಿಸಿಕೊಂಡು, ಶಿಥಿಲಾವಸ್ಥೆಯಲ್ಲಿದ್ದ ಒಂದು ಬಂಡಿಯೊಳಗಿಟ್ಟನು. ಆ ಬಂಡಿಗೆ ಎಲುವುಗೂಡಿನಂತಹ ಸೊರಕಲು ಎತ್ತುಗಳನ್ನು ಹೂಡಿ, ಆ ಬಂಡಿಯನ್ನು ಹೊಡೆದುಕೊಂಡು ಬೀದಿಯಲ್ಲಿ ಹೊರಟನು.

ಆಗ ಆ ಬೀದಿಯಲ್ಲಿ ಮಹಾ ವೈಭವದಿಂದ, ರಾಜಪರಿವಾರದವರ ಮೆರವಣಿಗೆಯುವನಾಗಿ ಗಜಾರೋಹಣ ಮಾಡಿಕೊಂಡು ರಾಜಕುಮಾರ ಬ್ರಹ್ಮದತ್ತನು ಬರುತ್ತಿದ್ದನು. ಈ ಮೆರವಣಿಗೆಯ ವಿಶೇಷಕ್ಕಾಗಿ ಆ ದಿನ ಬೀದಿಗಳೆಲ್ಲಾ ತಳಿರುತೋರಣಗಳಿಂದ, ಬಣ್ಣದ ರಂಗವಲ್ಲಿಗಳಿಂದ ಅಲಂಕಾರ ಮಾಡಲಾಗಿತ್ತು.

ಬಂಡಿ ಹೊಡೆದುಕೊಂಡು ಬರುವ ಮುದುಕನನ್ನು ನೋಡಿದ ಕೂಡಲೇ ರಾಜಕುಮಾರನು "ಏ ಮುದುಕಾ! ನಡೆಯಾಚೆ! ಏನು ಗರ್ವ ನನ್ನ ಮುಂದೆ ಬರಬೇಕಾದರೆ! ತೊಲಗಾಚೆ!" ಎಂದು ಕೂಗಿ ಜೋರು ಮಾಡಿದನು.

ಇದ್ದಕ್ಕಿದ್ದ ಹಾಗೆ ಯುವರಾಜನು ಹಾಗೆ ಕಿರಿಚುವುದನ್ನು ನೋಡಿ ಪ್ರಜೆಗಳಿಗೆಲ್ಲಾ ಆಶ್ಚರ್ಯವಾಯಿತು. "ಇದೇನು! ಯುವರಾಜನು ಹೀಗೇಕೆ ಕೂಗುತ್ತಾನೆ!" ಎಂದುಕೊಂಡರು. ವಿಚಿತ್ರವೇನೆಂದರೆ ಮಾರುವೇಷದಲ್ಲಿದ್ದ ದೇವೇಂದ್ರನೂ, ಬಂಡಿಯೂ ರಾಜಕುಮಾರನಿಗೆ ಹೊರತು ಬೇರೆ. ಯಾರಿಗೂ ಕಾಣುತ್ತಿದ್ದಿಲ್ಲ. ದೇವೇಂದ್ರನ ಈ ಮಾಯೆಯ ಮಹಿಮೆಯಿಂದಲೇ ಪ್ರಜೆಗಳ ಕಣ್ಣುಗಳಿಗೆ ಅದೇನೂ ಕಾಣದೆ ಮಾಯೆ ಕವಿದಿತ್ತು.

ಕೋಪಾವೇಶದಿಂದ ಕೂಗಾಡುವ ಯುವರಾಜನ ಆನೆಯ ಮೇಲಕ್ಕೇ ವೃದ್ಧನು ಗಾಡಿಯನ್ನೇರಿಸಿ ಗಾಡಿಯಲ್ಲಿದ್ದ ಮಜ್ಜಿಗೆಯ ಜಾಡಿಯನ್ನು ತೆಗೆದೆತ್ತಿ ಯುವರಾಜನ ನೆತ್ತಿಯ ಮೇಲೆ ಹಾಕಿ ಒಡೆದನು,

ಭೀತಿಯಿಂದ ಯುವರಾಜನು ಆನೆಯನ್ನು ಓಡಿಸಲು ನೋಡಿದನು. ಆಗ ದೇವೇಂದ್ರನು ಎರಡನೇ ಜಾಡಿಯನ್ನು ಕೂಡಾ ತೆಗೆದು ಯುವರಾಜನ ತಲೆಯ ಮೇಲೆ ಹೊಡೆದನು. ಆ ಮಜ್ಜಿಗೆಯಿಂದ ಯುವರಾಜನ ಶರೀರವೆಲ್ಲಾ ಒದ್ದೆಮುದ್ದೆಯಾಯಿತು. ಮಹೋಗ್ರತೆಯಿಂದ ಗರ್ಜಿಸಿದನು ಯುವರಾಜ.

ಅಷ್ಟರಲ್ಲಿ ಬಂಡಿಯೂ ಎತ್ತುಗಳೂ ಅದೃಶ್ಯವಾದುವು. ಮಜ್ಜಿಗೆ ಜಾಡಿಯ ಚೂರುಗಳೂ ಕಾಣಲಿಲ್ಲ. ನಿಜಸ್ವರೂಪದಿಂದ ದೇವೇಂದ್ರನು ಯುವರಾಜನ ಮುಂದೆ ಪ್ರತ್ಯಕ್ಷನಾದನು.

ಪಾದಾಕ್ರಾಂತನಾಗಿ ಬಿದ್ದ ಯುವರಾಜನನ್ನು ನೋಡಿ ದೇವೇಂದ್ರನು :

"ಈಗ ಹೇಳಲೇ ಯುವರಾಜಾ! ಗರ್ವಿಷ್ಠನಾಗಿರುವವನು ನೀನೋ ನಾನೋ? ಕಣ್ಣು ಕಾಣದ ಗರ್ವದಿಂದ ತಲೆತಿರುಗಿ ಹೋದುದು ಯಾರಿಗೆ? ನಿನಗೋ? ನನಗೋ? ಯಾವಾಗಲೂ ಇದೇ ಯೌವನದಲ್ಲಿ ಹೀಗೇ ಇರುವವನೋ ನೀನು? ನಿನಗೆ ವೃದ್ಧಾಪ್ಯವೇ ಬರುವುದಿಲ್ಲವೆಂದು ನಂಬಿರುವಿಯಾ? ಮುದುಕರನ್ನೂ, ಹಳೆಯ ವಸ್ತುಗಳನ್ನೂ ಗೇಲಿ ಮಾಡುವಿಯಾ? ನಿನ್ನ ದುಶ್ಚೇಷ್ಟೆಗಳಿಂದ ರಾಜ್ಯದಲ್ಲಿ ಪ್ರಜೆಗಳು ಎಷ್ಟು ಕಷ್ಟಪಡುತ್ತಿರುವರೆಂಬುದನ್ನು ತಿಳಿದಿರುವಿಯಾ? ನೀನು ಕೊಡುವ ಯಾತನೆಯಿಂದಾಗಿ ಪ್ರಜೆಗಳು ತಮ್ಮ ತಂದೆತಾಯಿಗಳನ್ನು ದೂರ ಪ್ರದೇಶಕ್ಕೆ ಕಳುಹಿಸಿಕೊಟ್ಟು, ಅವರನ್ನು ರಕ್ಷಿಸಲಾಗದೆ ಮಹಾ ಪಾಪಿಗಳಾಗಿದ್ದಾರೆಂಬ ಸಂಗತಿ ಸ್ವಲ್ಪವಾದರೂ ತಿಳಿದುಕೊಳ್ಳಲು ಪ್ರಯತ್ನಿಸಿದೆಯಾ? ಈ ವಿಧವಾಗಿ ನರಕಲೋಕ ತುಂಬಿಹೋಗಿ ಸ್ವರ್ಗಕ್ಕೆ ಒಬ್ಬರೂ ಬಾರದಿರುವುದನ್ನು ಸ್ವಲ್ಪವಾದರೂ ಯೋಚಿಸಿರುವಿಯಾ? ಈ ಕ್ಷಣದಿಂದಾದರೂ ಬುದ್ಧಿ ತಂದುಕೊಂಡು ಪ್ರವರ್ತಿಸುವಿಯಷ್ಟೇ? ತಪ್ಪಿದರೆ ಜಾಗ್ರತೆ! ಇಕೋ, ಈ ಸಿಡಿಲಾಯುಧ ನಿನ್ನ ತಲೆಯನ್ನು ಮುಂಡದಿಂದ ಬೇರ್ಪಡಿಸುತ್ತದೆ!" ಎಂದು ಎಚ್ಚರಿಸಿ ಅದೃಶ್ಯನಾದನು.

ಅಂದಿನಿಂದ ಬ್ರಹ್ಮದತ್ತನ ಪ್ರವರ್ತನೆ ಪೂರ್ತಿ ಬದಲಾಯಿಸಿತು. ಅವನು ವೃದ್ಧರನ್ನು ಪೂಜ್ಯಭಾವದಿಂದ ಗೌರವಿಸತೊಡಗಿದನು. ರಾಜ್ಯದಲ್ಲಿ ಮೊದಲಿದ್ದ ಅಶಾಂತಿ ತಗ್ಗಿತು. ಎಲ್ಲರೂ ಅವರವರ ತಂದೆ ತಾಯಿಗಳನ್ನು ದೂರ ಪ್ರಾಂತದಿಂದ ತಮ್ಮ ಬಳಿಗೆ ಕರೆಯಿಸಿಕೊಂಡರು. ಬೋಧಿಸತ್ವನ ಪ್ರಭಾವದಿಂದ ಎಲ್ಲರೂ ಸುಖವಾಗಿರತೊಡಗಿದರು.





# ಕಂಪೆನೀ ಯುಗ

ಹದಿನೆಂಟನೆಯ ಶತಮಾನದ ಪ್ರಾರಂಭದಲ್ಲಿ ಬ್ರಿಟಿಷ್ ಈಸ್ಟಿಂಡಿಯಾ ಕಂಪೆನೀ, ಕ್ರಮವಾಗಿ ಭಾರತದೇಶವನ್ನು ತನ್ನ ಅಧಿಕಾರದೊಳಗೆ ತರಲು ಪ್ರಯತ್ನಿಸಿತು. ಹಡಗುಗಳ ಮೇಲೆ ಹಡಗುಗಳಲ್ಲಿ ಬ್ರಿಟಿಷ್ ವರ್ತಕರು ಭಾರತದೇಶಕ್ಕೆ ಬರ ತೊಡಗಿದರು. ಆದರೆ ಭಾರತ ದೇಶದ ಸರಕುಗಳು ಬ್ರಿಟಿಷ್ ಸರಕುಗಳಿಗೆ ಸ್ವಲ್ಪವೂ ಕಡಿಮೆಯಾದುದಲ್ಲವಾದುದರಿಂದ, ಬ್ರಿಟಿಷ್ ಸರಕುಗಳಿಗೆ ಹೆಚ್ಚಿನ ಗಿರಾಕಿ ಇಲ್ಲದೆ ಹೋಯಿತು.

ಆದುದರಿಂದ ಈಸ್ಟಿಂಡಿಯಾ ಕಂಪೆನಿಯ ಜನರು ಆಗಾಗ ನಮ್ಮ ದೇಶದ ಕೆಲಸ ಜಾಣರಾದ ಜಾಡರ ಮನೆಗಳಿಗೆ ದಾಳಿ ಮಾಡಿ, ಮಗ್ಗಗಳನ್ನು ನಾಶಪಡಿಸಿ, ಅವರನ್ನು ಹೊಡೆದು ವಿಕಲಾಂಗರಾಗುವಂತೆ ಮಾಡುತ್ತಿದ್ದರು. ಆ ಕ್ರಮವಾಗಿ ಅವರು ವ್ಯಾಪಾರದಲ್ಲಿ ತಮ್ಮೊಂದಿಗೆ ಸ್ಪರ್ಧೆಗೆ ಬಾರದಂತೆ ಮಾಡಲು ಕಂಪೆನಿಯ ವರ್ತಕರು ಪ್ರಯತ್ನಿಸಿದರು.





ಕಂಪೆನಿಯವರು ಕೆಲವು ಪ್ರಾಂತಗಳಲ್ಲಿ ನೀಲಿ ಪೈರು ಬೆಳೆಸಲು ಪ್ರಾರಂಭಿಸಿ, ಸುತ್ತುಮುತ್ತಲಿನ ಕೂಲಿಯಾಳುಗಳನ್ನು ಕೆಲಸಕ್ಕೆ ತೆಗೆದುಕೊಂಡರು. ತಮಗೆ ತೃಪ್ತಿಯಾಗುವಂತೆ ಕೆಲಸ ಮಾಡದ ಬೇಸಾಯದ ಆಳುಗಳನ್ನು ಎತ್ತಿಗೆ ಹೊಡೆಯುವ ಹಾಗೆ ಹೊಡೆದು, ಕೊಡಬೇಕಾದ ಕೂಲಿಯನ್ನು ಕೊಡದೆ ಓಡಿಸುತ್ತಿದ್ದರು.




ದೇಶದೊಳಗಿನ ಸಣ್ಣ ಸಣ್ಣ ರಾಜರಿಂದ, ಜಮೀನುದಾರರಿಂದ, ಅಧಿಕಾರವನ್ನು, ಆಸ್ತಿ ಪಾಸ್ತಿಗಳನ್ನು ಬಗೆಬಗೆಯ ಕುಯುಕ್ತಿಗಳಿಂದ ತಾವೇ ಸಾಗಿಸುವಂತೆ ಕಂಪೆನೀ ದೊರೆತನ ಮಾಡಿತು. ಹೀಗೆ ಈಸ್ಟಿಂಡಿಯಾ ಕಂಪೆನಿ, ಬರಿಯ ವ್ಯಾಪಾರ ಸಂಸ್ಥೆಯಾಗಿರದೆ, ಭಾರತ ದೇಶದಲ್ಲಿ ದೊಡ್ಡ ಜಮೀನುದಾರಿಯಾಗಿ ರೂಪಾಂತರ ಹೊಂದಿತು.

ಕಂಪೆನಿ, ವಾರನ್ ಹೇಸ್ಟಿಂಗ್ಸ್‌ನನ್ನು ಬಂಗಾಳದ ಗವರ್ನರಾಗಿ ನಿಯಮಿಸಿತು. ಬಂಗಾಳಕ್ಕೆ ಸೇರಿದ ರಾಜಾ ನಂದಕುಮಾರ್, ವಾರನ್ ಹೇಸ್ಟಿಂಗ್ಸ್‌ನ ಲಂಚಕೋರತನವನ್ನು ಕುರಿತು ಮೇಲಿನವರಿಗೆ ಫಿರ್ಯಾದಿ ಮಾಡಿದನು. ಆದರೆ ಹೇಸ್ಟಿಂಗ್ಸ್‌ನ ಮಿತ್ರ ಇಂಪೇಯೇ ನ್ಯಾಯಮೂರ್ತಿಯಾದುದರಿಂದ, ಅವನು ನಂದಕುಮಾರನ ಮೇಲೆ ಕಳವಿನ ಆರೋಪಣೆ ಹಾಕಿ, ಅವನಿಗೆ ಮರಣ ದಂಡನೆ ವಿಧಿಸಿದನು.






ಪುಣ್ಯ ಸ್ಥಳಗಳನ್ನು ಸಂದರ್ಶಿಸುವ ಕೆಲವರು ಸಾಧುಗಳ ಮೇಲೆ ಬ್ರಿಟಿಷ್ ಕಂಪೆನಿ ತೆರಿಗೆ ವಿಧಿಸಿದುದರಿಂದ, ಸಾಧುಗಳೂ ಸನ್ಯಾಸಿಗಳೂ ಅದಕ್ಕೆ ಬದ್ಧಶತ್ರುಗಳಾಗಿ ಇದಿರು ತಿರುಗಿದರು. ಹೀಗೆ ಬ್ರಿಟಿಷ್ ಅಧಿಕಾರವನ್ನು ಇದಿರಿಸಿದವರಲ್ಲಿ ಸಾಮಾನ್ಯರಾದ ಸಾಧು, ಸನ್ಯಾಸಿಗಳು ಮೊದಲನೇಯವರಾದರು.

ಭವಾನೀಪಥಕ್, ದೇವೀ ಚೌಧುರಾಣಿ ಎಂಬ ಇಬ್ಬರು ಪ್ರಮುಖರು ಸಾಧುಗಳ ಬಂಡಾಯಕ್ಕೆ ನಾಯಕತ್ವ ವಹಿಸಿದರು. ಮುಖ್ಯವಾಗಿ ಚೌಧುರಾಣಿ ಎಂಬ ಧೀರ ವನಿತೆ, ದೋಣಿಯೊಳಗೇ ಮನೆ ನಿರ್ಮಿಸಿಕೊಂಡು, ಪ್ರಯಾಣ ಮಾಡುತ್ತ ಸಣ್ಣ ಸಣ್ಣ ದೋಣಿಗಳಲ್ಲಿರುವ ವೀರರಿಗೆ ನಾಯಕಳಾಗಿ ಅಸಮಾನವಾದ ಧೈರ್ಯ ಸಾಹಸಗಳನ್ನು ಪ್ರದರ್ಶಿಸಿದಳು.





ದೇವೀ ಚೌಧುರಾಣಿಯ ಅನುಚರರು ಹಠಾತ್ತಾಗಿ ಕಂಪೆನೀ ಹಡಗುಗಳ ಮೇಲೆ ದಾಳಿ ಮಾಡಿ, ಅವುಗಳನ್ನು ಮುಳುಗಿಸಿ ಮರು ಕ್ಷಣದಲ್ಲಿ, ಮಿಂಚಿನಂತೆ ಅಡವಿಗಳ ಮೂಲಕ ಪ್ರವಹಿಸುವ ನದಿಗಳ ಮೇಲೆ ಓಡಿಬಿಡುತ್ತಿದ್ದರು.

ಸಾಧುಗಳ ಬಂಡಾಯದ ಅನಂತರ ಪೂರ್ವ ಹಾಗು ಮಧ್ಯ ಭಾರತ ದೇಶದ ರೈತರು ಕಂಪೆನೀ ದೊರೆತನದ ಮೇಲೆ ತಿರುಗಿ ಬೀಳಲು ಪ್ರಾರಂಭಿಸಿದರು. ಆದರೂ ತುಪಾಕಿಗಳ ಸಹಾಯದಿಂದ ಕಂಪೆನೀ, ಆ ಬಂಡಾಯವನ್ನು ದಾರುಣವಾದ ರೀತಿಯಲ್ಲಿ ಅಡಗಿಸಿಬಿಟ್ಟಿತು. ಕಂಪೆನಿಯ ಅಧಿಕಾರವು ಹಳ್ಳಿಗಳವರೆಗೂ ಬೇರು ಹರಡಿಸಿತು.





ಹಾಗಾದರೂ ಕಂಪೆನಿಯ ಅಧಿಕಾರವು ವಿಸ್ತರಿಸಿ ಅಷ್ಟೇನೂ ಅಧಿಕಾರ ಸಾಗಿಸಲಾಗಲಿಲ್ಲ. ಕರ್ನಾಟಕ ಪ್ರಾಂತದ ಕಿತ್ತೂರು ರಾಜನು ಇಬ್ಬರು ಕುಮಾರರನ್ನು ವಾರಸುದಾರರಾಗಿ ಬಿಟ್ಟು ತೀರಿಹೋದನು. ಕುಮಾರರ ಪರವಾಗಿ ರಾಣಿ ಚೆನ್ನಮ್ಮ ಸಮರ್ಥತೆಯಿಂದ ರಾಜ್ಯ ಪಾಲನೆ ಮಾಡತೊಡಗಿದಳು.

ದುರದೃಷ್ಟದಿಂದ ರಾಜಕುಮಾರರಿಬ್ಬರೂ ಸತ್ತು ಹೋದರು. ಹಿರಿಯ ಯುವರಾಜನು ದತ್ತ ಪುತ್ರನನ್ನು ಬಿಟ್ಟು ತೀರಿಹೋಗಿದ್ದರೂ, ಕಿತ್ತೂರು ರಾಜ್ಯವನ್ನು ವಾರಸರಿಲ್ಲದ ರಾಜ್ಯ ವೆಂದು ಕಂಪೆನೀ ಪ್ರಭುತ್ವವು ಪ್ರಕಟಿಸಿತು. ಆ ರಾಜ್ಯವನ್ನು ವಶಪಡಿಸಿಕೊಳ್ಳಲು ಕಂಪೆನೀ ಸೈನಿಕರು ಬಂದರು. ಆದರೂ ರಾಣೀ ಚೆನ್ನಮ್ಮ ಸ್ವತಃ ತನ್ನ ಸೈನ್ಯಕ್ಕೆ ನಾಯಕತ್ವ ವಹಿಸಿ, ಬ್ರಿಟಿಷ್ ಕಂಪೆನೀ ಸೈನ್ಯವನ್ನು ಇದಿರಿಸಿದಳು.





ರಾಣಿಯ ಸೈನಿಕರು ಕೋಟೆಯ ಮೇಲಿನಿಂದ ಫಿರಂಗಿಗಳನ್ನು ಸುಡಿಸಿ, ಬ್ಲಾಕ್, ಡಿಪ್ಸನ್ ಎಂಬ ಬ್ರಿಟಿಷ್ ಸೇನಾನಾಯಕರನ್ನೂ, ಥಾಕರೇ ಎಂಬ ಕಂಪೆನಿಯ ಪ್ರತಿನಿಧಿಯನ್ನೂ ಕೊಂದರು. ೧೮೨೪ ನೇ ವರ್ಷದಲ್ಲಿ ನಡೆದ ಆ ಯುದ್ಧದಲ್ಲಿ, ಮೊದಲು ಕಂಪೆನೀ ಸೈನಿಕರು ಸೋತುಹೋದರೂ, ಆಮೇಲೆ ದೊಡ್ಡ ಸೈನ್ಯ ದೊಂದಿಗೆ ಬಂದು, ರಾಣಿ ಚೆನ್ನಮ್ಮನನ್ನು ಸೋಲಿಸಿ, ಖೈದಿನಲ್ಲಿಟ್ಟರು. ಆದರೂ ಅವಳು ಪ್ರಾರಂಭಿಸಿದ ವಿಪ್ಲವೋದ್ಯಮವು ತಣಿಯಲಿಲ್ಲ.



# ಮೂರು ವರಗಳು

ಹಿಂದೆ ಪಂಗನೂರು ಎಂಬ ಗ್ರಾಮದಲ್ಲಿ ವೆಂಕಣ್ಣ ನೆಂಬವನು ಊರವರ ದನಗಳನ್ನು ಮೇಯಿಸುವ ಕೆಲಸ ಮಾಡಿಕೊಂಡಿದ್ದನು. ಅವನ ಹೆಂಡತಿಯ ಹೆಸರು ಪೂರ್ಣಿಮೆ.

ವೆಂಕಣ್ಣ ಮೊದಲಿನಿಂದಲೂ ಸ್ವಲ್ಪ ದಡ್ಡನಾಗಿಯೇ ಇದ್ದನು. ದೊಡ್ಡವನಾದರೂ ಅವನ ಬುದ್ಧಿ ಅದಕ್ಕೆ ತಕ್ಕ ಹಾಗೆ ಬೆಳೆಯಲಿಲ್ಲ. ಆದರೆ ಅವನ ಹೆಂಡತಿ ಪೂರ್ಣಿಮೆ ಬಹಳ ಬುದ್ಧಿವಂತ ಹೆಣ್ಣು, ಅದು ವೆಂಕಣ್ಣನಿಗೂ ಗೊತ್ತಿತ್ತು. ಅಂತಲೇ ಅವನು ಹೆಂಡತಿಯ ಆಲೋಚನೆ ಕೇಳಿಯೇ ಯಾವ ಕೆಲಸ ವನ್ನಾದರೂ ಮಾಡುತ್ತಿದ್ದನು.

ಈ ದಂಪತಿಗಳಿಗಿರುವ ಆಸ್ತಿ ಎಂದರೆ ಒಂದು ಸಣ್ಣ ಮನೆ ಮತ್ತು ಎರಡು ದನಗಳು ಮಾತ್ರವೇ. ಪೂರ್ಣಿಮೆಗೆ ಹಾಲು ಮೊಸರು ವ್ಯಾಪಾರ. ಅವಳು ಬಹು ಚುರುಕಾಗಿ ಎಲ್ಲ ಕೆಲಸಗಳನ್ನೂ ನೋಡಿ ಕೊಳ್ಳುತ್ತ ಮನೇ ನಡೆಸುತ್ತಿದ್ದಳು. ವೆಂಕಣ್ಣ ದನ ಗಳನ್ನು ಕಾಡಿನ ಕಡೆಗೆ ಸಾಗಿಸಿ ಮೇಯಿಸಿ ಸಂಜೆಗೆ ಹಿಂದಿರುಗುವನು. ಅದೊಂದೇ ಅವನ ಬಹು ದೊಡ್ಡ ಕೆಲಸ.

ಅನೇಕ ದಿನಗಳಿಂದ ಅಡವಿಯಲ್ಲಿ ಒಬ್ಬ ಮುನಿ ಪರ್ಣಶಾಲೆ ನಿರ್ಮಿಸಿಕೊಂಡು, ಸಮೀಪದಲ್ಲಿರುವ ದೊಡ್ಡದೊಂದು ಮರದ ಕೆಳಗೆ ತಪಸ್ಸು ಮಾಡಿ ಕೊಂಡಿದ್ದನು. ಆತನನ್ನು ವೆಂಕಣ್ಣನು ಅನೇಕ ಬಾರಿ ನೋಡಿದ್ದರೂ, ಒಂದು ಸಾರಿ ಕೂಡಾ ಮಾತಾಡಿಸಲು ಪ್ರಯತ್ನಿಸಿರಲಿಲ್ಲ. ಅವನಿಗೆ ಹೊಸ ಆಲೋಚನೆಗಳು ಹರಿದರೆ ತಾನೇ ಮಾತಾಡಿಸಲಿಕ್ಕೆ ? ಯಾವಾಗಲೂ ಆ ಮುನಿ ಪದ್ಮಾಸನಸ್ಥನಾಗಿ ಕಣ್ಣುಮುಚ್ಚಿ ಧ್ಯಾನ ದಲ್ಲೇ ಇರುತ್ತಿದ್ದನು.

ಒಂದು ದಿನ ವೆಂಕಣ್ಣ ಕಾಡಿನಲ್ಲಿ ದನಗಳನ್ನು ಮೇಯಿಸಿಕೊಂಡಿರುವಾಗ ಇದ್ದಕ್ಕಿದ್ದ ಹಾಗೆ ದೊಡ್ಡ ಗಾಳಿಯೂ, ಮಳೆಯೂ ಪ್ರಾರಂಭವಾಯಿತು. ಅಲ್ಲಲ್ಲಿ ಲಟಲಟನೆ ಮರದ ಕೊಂಬೆಗಳು ಮುರಿದು ಬೀಳಲು ತೊಡಗಿದುವು. ದನಗಳೆಲ್ಲ ಬಾಲವೆತ್ತಿ ಓಡಿಬಂದು ವೆಂಕಣ್ಣನ ಸುತ್ತೂ ಕೂಡಿಕೊಂಡುವು. ರಭಸ ಕಡಿಮೆಯಾದ ಮೇಲೆ ಇನ್ನು ಅಲ್ಲಿರುವುದು ಕ್ಷೇಮವಲ್ಲವೆಂದು ತಿಳಿದುಕೊಂಡು ವೆಂಕಣ್ಣನು, ಪಶು ಗಳನ್ನು ಹೊಡೆದುಕೊಂಡು ಊರಿನ ದಾರಿ ಹಿಡಿದು ಹೊರಟನು.

ವಿ. ಬಾಬುರಾವ್



ಅವನು ಮುನಿ ಇರುವ ಪರ್ಣಶಾಲೆಯ ಹತ್ತಿರ ವಾಗಿ ಬರುವಾಗ, ಮುನಿ ಅಲ್ಲೆಲ್ಲಿಯೂ ಕಾಣಲಿಲ್ಲ. ಅಲ್ಲೆಲ್ಲಾ ಮರದ ಕೊಂಬೆಗಳು ಚೆಲ್ಲಾಚೆದರಾಗಿ ಬಿದ್ದಿದ್ದುವು. ಮುನಿಯ ಗತಿ ಏನಾಯಿತೋ, ಗಾಳಿ ಹಾರಿಸಿಕೊಂಡು ಹೋಯಿತೋ, ನೀರು ಕೊಚ್ಚಿಕೊಂಡು ಸಾಗಿತೋ ಎಂದುಕೊಳ್ಳುತ್ತ ವೆಂಕಣ್ಣನು ಮರಗಳ ಹತ್ತಿರ ಹೋಗಿ ನೋಡಿದನು. ಮುನಿ ಕೊಂಬೆಗಳ ಅಡಿಯಲ್ಲಿ ಕದಲದೆ ಬಿದ್ದಿರುವುದು ಕಂಡಿತು. ಕೂಡಲೇ ವೆಂಕಣ್ಣನ ಬುದ್ಧಿಗೂ ಅವಯವಗಳಿಗೂ ಚುರುಕು ಬಂದಿತು.

ವೆಂಕಣ್ಣನು ಬೇಗಬೇಗನೆ ಹೋಗಿ ಕೊಂಬೆಗಳನ್ನು ಆಚೆಗೆ ಎತ್ತಿ ಕೆಲವನ್ನು ಕಡಿದು ತಳ್ಳಿ ಮುನಿಯನ್ನು ಮೆಲ್ಲನೆ ಹೊರಕ್ಕೆ ಎಳೆದು, ತನ್ನ ಬೆನ್ನಿನ ಮೇಲೆ ಎತ್ತಿಕೊಂಡು ಪರ್ಣಶಾಲೆಯೊಳಗೆ ಒಯ್ದು ಮೆಲ್ಲನೆ ಮಲಗಿಸಿದನು. ಅಲ್ಲಿ ಮಲಗಿಸಿದ ಮೇಲೆ, ಅದು ವರೆಗೂ ಚಲಿಸದೆ, ಶಬ್ದವಿಲ್ಲದಿದ್ದ ಮುನಿ ಕಣ್ಣು ತೆರೆದು ಎದ್ದು ಕುಳಿತು, "ಯಾರು ನೀನು? ಏನಾಯಿತು? ಹೀಗೆಲ್ಲಾ ಮಾಡಲು ಕಾರಣವೇನು?" ಎಂದು ಆಶ್ಚರ್ಯದಿಂದ ಕೇಳಿದನು.

ಗಾಳಿ ಮಳೆಗಳಿಂದ ಮರದ ಕೊಂಬೆಗಳು ಮುರಿದು ಬಿದ್ದ ಸಮಾಚಾರವನ್ನೆಲ್ಲಾ ಮುನಿಗೆ ವಿವರಿಸಿ ಹೇಳಿ, "ತಾವು ದೊಡ್ಡ ತಪಸ್ಸಿನ ಶಕ್ತಿ ಉಳ್ಳವರು. ಆದುದರಿಂದಲೇ ಅಷ್ಟು ದಪ್ಪದ ಮರಗಳ ಕೊಂಬೆಗಳು ಮೇಲೆ ಬಿದ್ದರೂ ನಿಮಗೆ ಗಾಯ ಕೂಡಾ ಆಗಲಿಲ್ಲ. ಇನ್ನು ನಾನು ಹೊರಡಲೇ? ನಿಮಗೇನಾದರೂ ಸಹಾಯ ಬೇಕೆ? ಹೇಳಿದರೆ ಮಾಡುತ್ತೇನೆ" ಎಂದು ಕೇಳಿದನು ವೆಂಕಣ್ಣ.

ಮುನಿ ಅವನನ್ನು ನೋಡಿ, "ಸ್ವಲ್ಪ ಇರು. ಇನ್ನೇನೂ ಸಹಾಯ ಬೇಡಪ್ಪ. ನೀನು ಭೂತ ದಯಾಪರನಾಗಿ, ಕನಿಕರದ ಹೃದಯ ಉಳ್ಳವನು. ಉಂಡುಟ್ಟು ಸುಖವಾಗಿರುವವನಂತೆ ನೀನಿಲ್ಲ. ಆದ್ದರಿಂದ ನಿನಗೆ ತೋರುವ ಮೂರು ವರಗಳನ್ನು ಕೇಳಿಕೋ, ಕೊಡುತ್ತೇನೆ" ಎಂದನು.

ವೆಂಕಣ್ಣ ಸ್ವಲ್ಪಹೊತ್ತು ಆಲೋಚಿಸಿ, "ಏನು ಕೇಳಬೇಕೆಂದು ನನಗೇನೂ ತಿಳಿಯುವುದಿಲ್ಲ. ನನ್ನ ಹೆಂಡತಿಗೆ ಅದೆಲ್ಲಾ ಚೆನ್ನಾಗಿ ಗೊತ್ತಿರುತ್ತದೆ. ಮನೆಗೆ ಹೋಗಿ ಹೆಂಡತಿಯನ್ನು ಕೇಳಿ ಬರುತ್ತೇನೆ. ಆಗಬಹುದೆ?" ಎಂದನು.

"ಹಾಗೆಯೇ ಮಾಡು. ಆದರೂ ಮತ್ತೆ ಇಷ್ಟು ದೂರ ತಿರುಗಿ ಬರಬೇಕಾದ ಅಗತ್ಯವಿಲ್ಲ. ನೀನು ಹೆಂಡತಿಯೊಡನೆ ಕೇಳಿಯಾದ ಮೇಲೆ ಯಾವ ಮೂರು ವರಗಳನ್ನು ಅಂದಕೊಳ್ಳುವಿಯೋ ಅವು ಆ ಕ್ಷಣದಲ್ಲೇ ನಿನಗೆ ಸಿಗುತ್ತವೆ. ಇನ್ನು ಹೋಗಪ್ಪ" ಎಂದನು ಮುನಿ.

ವೆಂಕಣ್ಣ ಸಂತೋಷದಿಂದ ಮನೆಗೆ ತಲುಪಿದ ಮೇಲೆ, ಹೆಂಡತಿ ಪೂರ್ಣಿಮೆಯೊಂದಿಗೆ ನಡೆದ ಸಂಗತಿಯನ್ನೆಲ್ಲಾ ಹೇಳಿದನು.

ಪೂರ್ಣಿಮೆ ಬಹಳ ಹೊತ್ತು ಆಲೋಚನೆ ಮಾಡಿದ ಮೇಲೆ, "ಈಗ ಏನೋ ಇರುವುದರಲ್ಲೇ ನಾವು ಸುಖವಾಗೇ ಬದುಕಿಕೊಂಡಿದ್ದೇವೆ. ಆದರೂ ಅಷ್ಟು ದೊಡ್ಡ ಮುನೀಶ್ವರರು ಕೊಟ್ಟ ವರಗಳನ್ನು ನಾವು ಉಪಯೋಗಿಸಿಕೊಳ್ಳದಿದ್ದರೆ ಒಳ್ಳೆಯದಲ್ಲ. ನಾನು ಹೇಳಿದ ಹಾಗೆ ಕೇಳಿಕೊಳ್ಳಿರಿ. ಬಲವಾದ ಒಂದು ಕೋಲು, ಎಂದೆಂದೂ ಉಳಿಯುವ ಒಂದು ಕಸಬರಿಕೆ, ದನಗಳನ್ನು ಕಟ್ಟುವ ಗಟ್ಟಿಯಾದ ಹಗ್ಗ ಇವಿಷ್ಟು ಸಾಕು ನಮಗೆ" ಎಂದಳು.

ವೆಂಕಣ್ಣನಿಗೇನೋ ಬೆಲೆಯೇನಿಲ್ಲದ ಈ ಸಾಮಾನ್ಯ ವಸ್ತುಗಳನ್ನು ಕೇಳಿಕೊಳ್ಳಲು ಇಷ್ಟವಿರಲಿಲ್ಲ. ಆದರೂ ಅವನಿಗೆ ಹೆಂಡತಿಯ ಬುದ್ಧಿವಂತಿಕೆಯಲ್ಲಿ ಬಹಳ ನಂಬುಗೆ ಇದ್ದಿತು. ಆದುದರಿಂದ ವೆಂಕಣ್ಣ ಅವಳು ಹೇಳಿದ ಹಾಗೆಯೇ ಕೇಳಿಕೊಂಡನು.

ಕೂಡಲೇ ಆ ಮೂರು ವಸ್ತುಗಳೂ ಅಲ್ಲಿ ಪ್ರತ್ಯಕ್ಷವಾದುವು. ಪೂರ್ಣಿಮೆ ಕೋಲನ್ನು ಗಂಡನಿಗೆ ಕೊಟ್ಟು, ಹಗ್ಗದಿಂದ ದನಗಳನ್ನು ಕಟ್ಟಿದಳು. ಆಮೇಲೆ ಕಸಬರಿಕೆಯಿಂದ ಸಂತೋಷವಾಗಿ ಒಂದು ಸಾರಿ ಮನೆ ಪೂರಾ ಕಸಬಳಿದಳು.

ಮರುದಿನ ವೆಂಕಣ್ಣನು ದನಗಳನ್ನು ಸಾಗಿಸಿಕೊಂಡು ಅಡವಿಗೆ ಹೋದನು. ಮುನಿ ಆಶ್ರಮದ ಹತ್ತಿರ ಅಡ್ಡಾದಿಡ್ಡಿಯಾಗಿ ಬಿದ್ದ ಕೊಂಬೆಗಳನ್ನೂ, ಕಸ ಕಪ್ಪುಗಳನ್ನೂ ಎತ್ತಿ ಬಳಿದು ಆಚೆಗೆ ಹಾಕುತ್ತ ಶುಭ್ರಪಡಿಸಿಕೊಂಡಿದ್ದನು.

ಅಲ್ಲಿಗೇ ಬಂದ ವೆಂಕಣ್ಣನನ್ನು ನೋಡಿ ಮುನಿ, "ಏನು ವರಗಳನ್ನು ಕೇಳಿಕೊಂಡೆಯೋ ?" ಎಂದು ಕೇಳಿದನು.

ವೆಂಕಣ್ಣನು ಮುನಿಗೆ ನಮಸ್ಕಾರ ಮಾಡಿ, "ಕೇಳಿಕೊಂಡೆನು ಸ್ವಾಮೀ. ಒಂದು ಕಸಬರಿಕೆ, ಒಂದು ಕೋಲು, ಒಂದು ಹಗ್ಗ ಇವಿಷ್ಟು ಯಾವಾಗಲೂ ಇರಬೇಕೆಂದು ಪಡೆದುಕೊಂಡೆನು" ಎಂದನು.

ಅವನ ಮಾತುಕೇಳಿ ಮುನಿ ಆಶ್ಚರ್ಯಪಟ್ಟು, "ನಾನು ಕೊಟ್ಟ ವರಗಳನ್ನು ಇಷ್ಟೊಂದು ಅಲ್ಪ ವಸ್ತುಗಳಿಗಾಗಿ ವಿನಿಯೋಗಿಸಿಕೊಂಡೆಯಾ ?" ಎಂದನು.



"ನಾನು ಯಾವ ಕೆಲಸವನ್ನಾದರೂ ನನ್ನ ಹೆಂಡತಿಯ ಸಲಹೆಯ ಹಾಗೆಯೇ ಮಾಡುತ್ತೇನೆ. ಅವಳ ಮಾತು ಕೆಲಸಕ್ಕೆ ಬಾರದ್ದೇನೂ ಅಲ್ಲ ಸ್ವಾಮಿ!" ಎಂದನು ವೆಂಕಣ್ಣ.

ವೆಂಕಣ್ಣನ ಹೆಂಡತಿ ಹಾಗೆ ಕೇಳಿಕೊಳ್ಳಲು ಏಕೆ ಹೇಳಿದಳೆಂದು ತಿಳಿದುಕೊಳ್ಳಲು ಮುನಿಗೆ ಕುತೂಹಲವಾಯಿತು. ಅವನು ವೆಂಕಣ್ಣನ ಜತೆಯಲ್ಲೇ ಅವನ ಮನೆಗೆ ಬಂದು ಪೂರ್ಣಿಮೆಯೊಂದಿಗೆ, "ಅಮ್ಮಾ, ನಾನು ನಿಮಗೆ ಬಹಳ ಒಳ್ಳೆಯದಾಗಬೇಕೆಂದು ಕೊಂಡು ಮೂರು ವರಗಳನ್ನು ಕೊಟ್ಟರೆ, ಏನೂ ಪ್ರಯೋಜನವಿಲ್ಲದ ವಸ್ತುಗಳನ್ನು ಸಂಪಾದಿಸಿಕೊಳ್ಳಲು ಉಪಯೋಗಿಸಿಕೊಂಡಿ ಏಕೆ? ಏನಾದರೂ ಐಶ್ವರ್ಯದ ವರ ಪಡೆಯಬಹುದಿತ್ತಲ್ಲಾ?" ಎಂದನು.

ಪೂರ್ಣಿಮೆ ಮುನಿಗೆ ತಲೆಬಾಗಿ ನಮಸ್ಕಾರ ಮಾಡಿ, "ಸ್ವಾಮಿ, ನಿಮ್ಮ ವರಗಳ ಪ್ರಭಾವದಿಂದ ನಮಗೆ ಸಿರಿಸಂಪತ್ತು ಬರುವ ಹಾಗೆ ಮಾಡಿಕೊಳ್ಳಬಹುದು ನಿಜ. ಆದರೆ ಒಮ್ಮೆಗೇ ನಡುವಿನಲ್ಲಿ ಬಂದ ಸಿರಿ ನರಗಳ ಮೇಲೆದ್ದ ಹುಣ್ಣಿನ ಹಾಗೆ ಕಡೆಗೆ ದುಃಖಕ್ಕೆ ಕಾರಣವಾಗುವುದೆಂಬ ಸಂಗತಿ ನಿಮಗೆ ಗೊತ್ತಿಲ್ಲದ್ದಲ್ಲ. ಕಷ್ಟಪಡದೆ ಲಭಿಸುವ ಧನವು ಮನುಷ್ಯರಿಗೆ ಮೇಲು ಮಾಡುವುದಕ್ಕಿಂತಲೂ ಕೇಡೇ ಮಾಡುತ್ತದೆಂದು ದೊಡ್ಡವರು ಹೇಳುತ್ತಾರೆ!" ಎಂದಳು. "ಅದೇನೋ ನಿಜವೇ. ಆದರೂ ಕುತೂಹಲದಿಂದ ಕೇಳುತ್ತೇನೆ. ನನ್ನ ವರಗಳನ್ನು ಇಷ್ಟೊಂದು ಅಲ್ಪ ವಸ್ತುಗಳಿಗಾಗಿ ಏಕೆ ಉಪಯೋಗಿಸಿದಿ?" ಎಂದು ಕೇಳಿದನು ಮುನಿ.

"ಸ್ವಾಮಿ, ಅವೇನೂ ಅಲ್ಪ ವಸ್ತುಗಳಲ್ಲವಷ್ಟೆ? ನಿಮ್ಮ ವರ ಪ್ರಭಾವದ ಕಸಬರಿಕೆಯಲ್ಲಿ ಬಳಿದರೆ ಮನೆ ಲಕ್ಷ್ಮೀ ಕಳೆಯಿಂದ ಬೆಳಗುತ್ತದೆ. ನಿಮ್ಮ ದಯದಿಂದ ನಮಗೆ ಲಭಿಸಿದ ಕೋಲು ಆಪತ್ತಿನ ಸಮಯದಲ್ಲಿ ರಕ್ಷಣೆಗಾಗಿ ನಿಲ್ಲುತ್ತದೆ. ವರಪ್ರಸಾದದಿಂದ ದೊರೆತ ದನಗಳನ್ನು ಕಟ್ಟುವ ಹಗ್ಗ ಯಾವಾಗಲೂ ಮನೆಯಲ್ಲಿ ದನಗಳನ್ನು ಕಟ್ಟಿಕೊಂಡೇ ಇರುತ್ತದೆ. ಹೀಗೆ ನಿಮ್ಮ ವರಗಳಿಂದ ನಮಗೆ ಕಡೇವರೆಗೆ ಯಾವುದರಲ್ಲಿಯೂ ಕಡಿಮೆಯಾಗದು!" ಎಂದಳು ಪೂರ್ಣಿಮೆ.

ಪೂರ್ಣಿಮೆಯ ತಿಳಿವಳಿಕೆಯನ್ನು ಮುನಿ ಸಂತೋಷದಿಂದ ಮೆಚ್ಚಿದನು. ತನ್ನ ವರಗಳು ಎಷ್ಟು ವಿಚಿತ್ರವಾಗಿ ಆ ಮನೆಯನ್ನು ಕಾಪಾಡುತ್ತವೆಂದು ತಿಳಿದಾಗ ನಿಜಕ್ಕೂ ತನ್ನ ವರ ಸಾರ್ಥಕವಾಯಿತೆಂದುಕೊಂಡನು. ಆ ದಂಪತಿಗಳನ್ನು ಆಶೀರ್ವದಿಸಿ ಮುನಿ ತನ್ನ ಪರ್ಣಶಾಲೆಗೆ ಹೊರಟುಹೋದನು.





# ಉಪಕಾರ

ಚಂದನದೇಶದಲ್ಲಿ ಪೂರ್ವ ಕಾಲದಿಂದ ಒಂದು ಆಚಾರವಿದ್ದಿತು. ಯುವರಾಜನಾಗಿರುವವನು ರಾಜ ಪಟ್ಟಾಭಿಷೇಕವಾಗುವುದಕ್ಕೆ ಮೊದಲು ಒಬ್ಬನೇ ದೇಶ ಸಂಚಾರ ಮಾಡಿಕೊಂಡು ಬರಬೇಕಾಗಿತ್ತು. ಆ ವಿಧವಾಗಿ ಪ್ರಾಪ್ತ ವಯಸ್ಸಿಗೆ ಬಂದ ಯುವರಾಜ ಪ್ರತಾಪವರ್ಮನು ದೇಶಸಂಚಾರಕ್ಕೆ ಹೊರಟನು.

ಹಾಗೆ ಅವನು ಊರಿಂದೂರಿಗೆ ತಿರುಗುತ್ತ, ಒಂದಾನೊಂದು ಗ್ರಾಮದ ಹತ್ತಿರ ಹೋಗುವಾಗ ಅವನ ಕಾಲಿಗೆ ಮುಳ್ಳು ಚುಚ್ಚಿ ರಕ್ತ ಕಾರತೊಡಗಿತು. ನೋವಿನಿಂದ ನಡೆಯಲಾಗದೆ ಪ್ರತಾಪವರ್ಮನು ಅಲ್ಲಿಯೇ ಕುಸಿ ಕುಳಿತು ಏನು ಮಾಡಬೇಕೆಂದು ತೋರದೆ ಆಚೀಚೆ ನೋಡತೊಡಗಿದನು.

ಆ ಸಮಯವಲ್ಲಿ ಸುಹಾಸಿನಿ ಎಂಬ ರೈತನ ಮಗಳೊಬ್ಬಳು ಊರ ಕೊನೆಯಲ್ಲಿದ್ದ ಮದರಂಗಿ ಸೊಪ್ಪನ್ನು ಕೊಯಿದುಕೊಂಡು ಹೋಗಲು ಆ ದಾರಿಯಾಗಿ ಬಂದಳು. ಅವಳು ಪ್ರತಾಪವರ್ಮನ ಅವಸ್ಥೆಯನ್ನು ನೋಡಿ ಕನಿಕರಗೊಂಡು, ಅತ್ತಿತ್ತ ನೋಡಿ, ಪಕ್ಕದಲ್ಲಿದ್ದ ಸೂರಿಮುಳ್ಳಿನ ಪೊದರಿನಿಂದ ದೊಡ್ಡದೊಂದು ಮುಳ್ಳನ್ನು ಮುರಿದು ತಂದು ಪ್ರತಾಪನ ಕಾಲಿಗೆ ಚುಚ್ಚಿದ ಮುಳ್ಳನ್ನು ಅದರಿಂದ ಹೊರಕ್ಕೆ ತೆಗೆದಳು. ಮತ್ತೊಂದು ಪೊದರಿನ ಎಲೆಗಳನ್ನಿಷ್ಟು ಅಂಗೈಯಲ್ಲಿ ತಿಕ್ಕಿ ರಸ ತೆಗೆದು ಅವನ ಗಾಯಕ್ಕೆ ಒರೆಸಿ, ತನ್ನ ಸೀರೆಯ ಸೆರಗನ್ನು ಹರಿದು ಕಟ್ಟಿದಳು.

ಪ್ರತಾಪವರ್ಮನು ಕೃತಜ್ಞತೆಯಿಂದ, "ನೀನು ನನಗೆ ಮಾಡಿದ ಸಹಾಯವು ಎಂದಿಗೂ ಮರೆಯಲಾರದಂತಹುದು. ನಿನಗೆ ಏನು ಬೇಕು ಕೇಳು, ಕೊಡುತ್ತೇನೆ" ಎಂದನು.

ಸುಹಾಸಿನಿ ಪರಿಹಾಸವಾಗಿ ನಗುತ್ತ, "ಮೊದಲು ನಿನ್ನ ಕಾಲಿನ ಮುಳ್ಳನ್ನು ನೀನೇ ತೆಗೆದು ಹಾಕಲು ಕಲಿತುಕೋ. ಆಮೇಲೆ ನನ್ನ ಸಂಗತಿ ನೋಡಿಕೊಂಡರೆ ಸಾಕು." ಎಂದಳು ತನ್ನ ಪಾಡಿಗೆ ಹೋಗಲು ನೋಡುತ್ತ.

"ಹಾಗೆಂದರೆ ಏನರ್ಥ? ನಿನ್ನ ಉಪಕಾರಕ್ಕೆ ನಾನು ಏನಾದರೂ ಕೊಡಬೇಕಲ್ಲ?" ಎಂದನು ಪ್ರತಾಪವರ್ಮ.

"ಅದು ನೀನೇ ಕಲಿತರೆ ಇದೇನೂ ದೊಡ್ಡ ಕಾರ್ಯವಲ್ಲಾ ಅಂತ ನಿನಗೇ ಗೊತ್ತಾಗುತ್ತದೆಂಬುದೇ ನನ್ನ ಮಾತಿನ ಅರ್ಥ." ಎಂದಳು ಸುಹಾಸಿನಿ ನಗುತ್ತ.

ಜಿ. ಆರ್. ಲಕ್ಷ್ಮಿ



ಪ್ರತಾಪವರ್ಮನು ನಗುತ್ತ "ಹಾಗೆ ಕಲಿತುಕೊಳ್ಳಬೇಕಾದ ಆಗತ್ಯ ನನಗೆ ಈವರೆಗೂ ಬರಲಿಲ್ಲ. ಯಾವಾಗಲೂ ಯಾರೋ ಒಬ್ಬರು ನನಗೆ ಸೇವೆ ಮಾಡುತ್ತಾ ಇರುತ್ತಾರೆ. ಹೋಗಲಿ, ಈಗಾದರೂ ಕಲಿಯಬೇಕೆಂದಿರುವಾಗ ಸಮಯಕ್ಕೆ ನೀನು ಬಂದು ಸೇವೆ ಮಾಡಿದಿಯಲ್ಲ? ಏನು ಬೇಕು ಕೇಳಿಬಿಡು" ಎಂದನು.

"ಓ ಏನು ಕೇಳಿದರೂ ಕೊಡುವೆನೆಂದು ಮಹಾರಾಜನ ಹಾಗೇ ಬಡಾಯಿ ಕೊಚ್ಚುವಿ! ನನ್ನನ್ನು ರಾಣಿಯಾಗುವಂತೆ ಮಾಡುವಿಯಾ?" ಎಂದಳು ಸುಹಾಸಿನಿ.

ಆ ಪ್ರಶ್ನೆಯನ್ನು ಕೇಳಿ ಸುಹಾಸಿನಿಯನ್ನು ನೋಡಿದನು ಪ್ರತಾಪ. ಅವಳ ಸೌಂದರ್ಯವು ಅವನನ್ನು ಮುಗ್ಧಗೊಳಿಸಿತು. ಅವನು ಮುಗುಳು ನಗುತ್ತ, "ಈ ದೇಶಕ್ಕೆ ರಾಣಿಯಾಗಬೇಕೆಂಬ ಆಶೆ ನಿನಗಿರುವುದು ನಿಜವಾದರೆ, ಕೇಳಬೇಕಾದವನ ಹತ್ತಿರವೇ ಕೇಳಿರುವಿ. ನಾನು ಈ ದೇಶಕ್ಕೆ ಮುಂದೆ ಬರಲಿರುವ ರಾಜನೇ. ಪ್ರತಾಪವರ್ಮನೆಂದು ನನ್ನ ಹೆಸರು. ದೇಶ ಸಂಚಾರಮಾಡಲು ಹೊರಟಿದ್ದೇನೆ. ಇದುವರೆಗೂ ನಿನ್ನನ್ನು ಮೀರಿಸುವಂತಹ ಸುಂದರಿಯನ್ನು ಎಲ್ಲಿಯೂ ನೋಡದೇ ಹೋದುದು ನಿನ್ನ ಅದೃಷ್ಟ. ನಿನ್ನನ್ನು ನಿಜಕ್ಕೂ ನನ್ನ ರಾಣಿಯಾಗಿ ಮಾಡಿಕೊಳ್ಳುತ್ತೇನೆ. ಸರಿಯಷ್ಟೆ?" ಎಂದನು.

ಆ ಮಾತು ಕೇಳಿ ಸುಹಾಸಿನಿ ಚಂಚಲಕ್ಕೆ ಬೀಳದೆ, "ಸುಂದರಿಯರಾದ ಹೆಣ್ಣುಗಳನ್ನು ನೋಡಿದ ಮಾತ್ರಕ್ಕೆ ಕೆಲವರಿಗೆ ಸುಳ್ಳು ಹೇಳುವ ಬುದ್ಧಿ ಬಂದು ಬಿಡುತ್ತೆ. ನೀನು ನಿಜಕ್ಕೂ ರಾಜನಾಗುವವನಾದರೆ ಅದರ ನಿಜವನ್ನು ನಾನೇ ತಿಳಿದುಕೊಳ್ಳಲು ಸಾಧ್ಯವಿದೆ" ಎಂದಳು.

"ನೀನಾಗಿ ಹೇಗೆ ತಿಳಿದುಕೊಳ್ಳುವಿ?" ಎಂದು ಪ್ರತಾಪವರ್ಮನು ಕೇಳಿದನು.

"ಹೇಗೆಂದರೆ ನೀನೇ ನಿಜವಾದ ರಾಜನಾಗುವವನಾದರೆ, ನನ್ನನ್ನು ಮದುವೆ ಮಾಡಿಕೊಳ್ಳುವವನಾದರೆ ನಮ್ಮ ದೇಶದಲ್ಲಿ ಸೂರ್ಯನು ಪಶ್ಚಿಮ ದಿಕ್ಕಿನಲ್ಲಿ ಉದಯಿಸುವ ಹಾಗೆ ಮಾಡಬೇಕು. ಗಂಗಾ ನದಿ ನಮ್ಮ ದೇಶದಲ್ಲಿ ಹರಿಯುವ ಹಾಗೆ ಮಾಡಬೇಕು" ಎಂದಳು ಸುಹಾಸಿನಿ.

ಸುಹಾಸಿನಿಯ ಮಾತು ಕೇಳುತ್ತ ಪ್ರತಾಪವರ್ಮನು ಬೆರಗಾದನು. "ಇದು ಯಾರಿಂದಲೂ ಸಾಧ್ಯವಾಗುವ ಕೆಲಸವಲ್ಲ. ನೀನು ಕೇವಲ ಪರಿಹಾಸ ಮಾಡುವಿ" ಎಂದನು.

"ನಾನು ಪರಿಹಾಸವೇನೂ ಮಾಡಲಿಲ್ಲ. ಅಧಿಕಾರದಲ್ಲಿರುವವರು ಯಾವ ಕಾರ್ಯವನ್ನಾದರೂ ಸಾಧಿಸಿ ಬಿಡುತ್ತಾರೆ. ನೀನು ಬಡಾಯಿಗಾರನಾದ್ದರಿಂದ ನಿನ್ನಿಂದ ಅದೆಲ್ಲ ಆಗದು" ಎಂದಳು ಗಂಭೀರವಾಗಿ.

ಪ್ರತಾಪವರ್ಮನು ಸ್ವಲ್ಪ ಯೋಚಿಸಿ "ಸರಿ. ನನಗೆ ಒಂದು ತಿಂಗಳು ಗಡುವು ಕೊಡು. ನೀನು ಹೇಳಿದ್ದನ್ನು ಸಾಧಿಸುತ್ತೇನೆ" ಎಂದನು.

ಸುಹಾಸಿನಿ ಅದಕ್ಕೆ ಒಪ್ಪಿ, "ನೋಡುತ್ತೇನೆ ನಿನ್ನ ಸತ್ಯವನ್ನು" ಎನ್ನುತ್ತಾ, ಹೊರಟುಹೋದಳು.

ಪ್ರತಾಪವರ್ಮನು ರಾಜಧಾನಿಗೆ ಹಿಂದಿರುಗಿದ ಮೇಲೆ ಮಂತ್ರಿಗಳನ್ನೆಲ್ಲಾ ಕರೆದು, "ಸೂರ್ಯನು ಪಶ್ಚಿಮ ದಿಕ್ಕಿನಲ್ಲಿ ಉದಯಿಸಬೇಕು, ಗಂಗಾನದಿ ನಮ್ಮ ದೇಶದಲ್ಲಿ ಪ್ರವಹಿಸಬೇಕು, ಅದಕ್ಕೆ ಏನೇನು ಮಾಡಬೇಕೋ ಹೇಳಿರಿ" ಎಂದು ಕೇಳಿದನು.

ಆ ಮಾತು ಕೇಳಿ ಮಂತ್ರಿಗಳಿಗೆ ಆಶ್ಚರ್ಯವೂ ದಿಗಿಲೂ ಹಿಡಿಯಿತು. "ಏನು ಹೇಳುವಿರಿ ಯುವ ರಾಜರೇ! ದೇಶ ಸಂಚಾರದಲ್ಲಿ ಎಲ್ಲಿಯಾದರೂ ಯಾವುದೋ ಹುಚ್ಚುಕಾಯಿಯಂಥಾದ್ದೇನಾದರೂ ತಿಂದಿರೇನೋ! ಕಾಲಗತಿಯನ್ನು ಮಾರ್ಪಡಿಸುವುದು ಯಾರಿಗಾದರೂ ಸಾಧ್ಯವೇ? ಎಲ್ಲಿಯೋ ಇರುವ ಗಂಗಾನದಿಯನ್ನು ನಮ್ಮ ದೇಶಕ್ಕೆ ತರುವುದೆಂದರೇನು? ಎರಡೂ ಅಸಾಧ್ಯಗಳೇ!" ಎಂದು ಹೇಳಿದರು. ಯುವರಾಜನನ್ನು ತೀವ್ರ ವೈದ್ಯ ಪರಿಶೋಧನೆಗೆ ತೊಡಗಿಸಬೇಕೆಂದೂ ಮಂತ್ರಿಗಳಿಗೆ ತೋರಿತು.

"ಅಸಾಧ್ಯವಾದರೆ ನಾನು ಯುವರಾಜನೋ ರಾಜನೋ ಆಗಿ ಏನು ಪ್ರಯೋಜನ? ರಾಜಾಧಿಕಾರಕ್ಕೆ ಅರ್ಥವೇ ಇಲ್ಲ! ಹಾಗಾದರೆ ನನಗೆ ರಾಜ್ಯ ಭಾರದ ಗೊಡವೆಯೇ ಬೇಡ. ಸಾಮಾನ್ಯ ಪ್ರಜೆಗಳ ಹಾಗೆ ನಾನೂ ಇದ್ದು ಬಿಡುತ್ತೇನೆ. ಅಷ್ಟೇ" ಎಂದನು ಪ್ರತಾಪವರ್ಮ.

ಮಗನಲ್ಲಾದ ವಿಪರೀತವನ್ನು ಕೇಳಿ ಮಹಾರಾಜನು ಪ್ರತಾಪವರ್ಮನ ಬಳಿಗೆ ಬಂದು, "ಕುಮಾರಾ, ನೀನು ಹೇಳುವ ಮಾತುಗಳು ನಿಜಕ್ಕೂ ಅಸಾಧ್ಯಗಳೇ. ನಿನಗೆ ರಾಜ್ಯಭಾರವನ್ನು ಸ್ವೀಕರಿಸಲು ಇಷ್ಟವಿಲ್ಲದೆ ಹೀಗೆ ಹುಚ್ಚು ಮಾತು ಹೇಳಿ ನಟಿಸುವಿಯೆಂದು ನನಗೆ ತೋರುತ್ತದೆ. ಅಂಥಾ ವೈರಾಗ್ಯ ಬರಲು ಏನಾಯಿತಪ್ಪಾ?" ಎಂದು ಕೇಳಿದನು.

ಆಗ ಪ್ರತಾಪವರ್ಮನು ಸುಹಾಸಿನಿಯ ವಿವರಗಳನ್ನೆಲ್ಲಾ ಇದ್ದುದು ಇದ್ದ ಹಾಗೆಯೇ ಹೇಳಿದನು.

ಅದನ್ನು ಕೇಳಿ ಮಹಾರಾಜನು ಆಶ್ಚರ್ಯಪಟ್ಟು, ಕಡೆಗೆ ಮುಗುಳು ನಗುತ್ತ, "ಅಷ್ಟೇನಾ!





ಮೂರ್ಖಳಾದ ಒಬ್ಬಳು ಹಳ್ಳಿಗಾಡಿನ ಹುಡುಗಿ ಹೇಳಿದ ಹರಟೆ ಮಾತು ಹಿಡಿದುಕೊಂಡು ನೀನು ಹೀಗೊಂದು ನಿಶ್ಚಯಕ್ಕೆ ಬರುವುದು ಏನೂ ಚೆನ್ನಾಗಿಲ್ಲ" ಎಂದನು.

"ಅವಳು ಮೂರ್ಖಳಲ್ಲ ಅಪ್ಪಾ, ಬಹಳ ಬುದ್ಧಿವಂತೆ" ಎಂದನು ಪ್ರತಾಪವರ್ಮ.

"ಅದನ್ನೂ ನೋಡಿಬಿಡೋಣ !" ಎಂದು ಮಹಾರಾಜನು ಕೂಡಲೇ ಭಟರನ್ನು ಕಳುಹಿಸಿ, ಸುಹಾಸಿನಿಯನ್ನು ಸಗೌರವದಿಂದ ಅಂತಃಪುರಕ್ಕೆ ಬರಮಾಡಿಕೊಂಡನು.

ಪ್ರತಾಪವರ್ಮನು ನಿಜಕ್ಕೂ ಯುವರಾಜನೆಂದು ತಿಳಿದಕೂಡಲೇ, ಸುಹಾಸಿನಿ ಆಶ್ಚರ್ಯಪಟ್ಟು ಪ್ರತಾಪವರ್ಮನ ಮುಂದೆ ತಲೆ ತಗ್ಗಿಸಿ ವಿನಯದಿಂದ, "ನಿಜವನ್ನು ತಿಳಿಯದೆ ಏನೇನೋ ಹೇಳಿಬಿಟ್ಟೆನು. ನನ್ನ ತಪ್ಪನ್ನು ಕ್ಷಮಿಸಬೇಕು" ಎಂದು ಬೇಡಿಕೊಂಡಳು.

ಅದಕ್ಕೆ ಪ್ರತಾಪವರ್ಮನು, "ನಿನ್ನ ತಪ್ಪು ಅಷ್ಟು ಸುಲಭದಲ್ಲಿ ಕ್ಷಮಿಸುವಂತಹದಲ್ಲ. ನೀನು ಹೇಳಿದ ಕಾರ್ಯವನ್ನು ನಾನು ಸಾಧಿಸಲಾಗದೆ ಹೋದೆನು. ಅವು ಸಾಧ್ಯವಾಗುವಂಥವೇ ಎಂದು ನೀನು ನಿರೂಪಿಸಬೇಕಾಗಿದೆ, ಆದಾಗದಿದ್ದರೆ ಕಠಿಣ ಶಿಕ್ಷೆ ಅನುಭವಿಸಬೇಕು" ಎಂದನು.

ಆ ಮಾತು ಕೇಳಿ ಸುಹಾಸಿನಿ ಧೈರ್ಯದಿಂದ ಮುಖವೆತ್ತಿ, "ಹಾಗಾದರೆ ನಾನು ಹೇಳಿದ ಕೆಲಸಗಳು ಸಾಧ್ಯವೇ ಎಂದು ನಿರೂಪಿಸಿ ತೋರಿಸುತ್ತೇನೆ. ಅದಕ್ಕೆ ತಕ್ಕ ಹಾಗೆ ನನಗೆ ಅಧಿಕಾರಬೇಕು" ಎಂದಳು.

"ನಾನು ಈಗ ಯುವರಾಜನೇ ಹೊರತು ಈ ದೇಶಕ್ಕೆ ರಾಜನಲ್ಲ. ಇಷ್ಟವಿದ್ದರೆ ನೀನು ಕೇಳುವ ಅಧಿಕಾರ ಯಾವ ರೀತಿಯದೆಂದು ಹೇಳು. ತಂದೆಯನ್ನು ಕೇಳಿ ಅವರಿಂದ ಕೊಡಿಸುತ್ತೇನೆ" ಎಂದನು ಪ್ರತಾಪವರ್ಮ.

ಈ ಸಂಗತಿಯನ್ನು ತಿಳಿದು ಮಹಾರಾಜನು ಬಹಳ ಹೊತ್ತು ಆಲೋಚನೆ ಮಾಡಿದನು. ಸುಹಾಸಿನಿ ಬುದ್ಧಿವಂತಳಾಗಿರುವಂತೆ ಅವನಿಗೆ ತೋರಿತು. ಅವಳಿಗೆ ಅಧಿಕಾರ ಕೊಡಬೇಕಾದರೆ ರಾಣಿಯಾಗಿ ಮಾಡಬೇಕು. ರಾಣಿಯಾಗಿ ಮಾಡಿಬಿಟ್ಟರೆ ಶಿಕ್ಷೆ ಕೊಡಲು ಸಾಧ್ಯವಾಗದು.

ಸ್ವಲ್ಪ ಹೊತ್ತು ಆಲೋಚಿಸುವಾಗ ರಾಜನಿಗೆ ಒಂದು ಉಪಾಯವು ತೋರಿತು. ಅವನು ಸುಹಾಸಿನಿಯೊಂದಿಗೆ, "ಸರಿಯಮ್ಮ. ಈ ದಿನದಿಂದ ನೀನು ದೇಶಕ್ಕೆ ರಾಣಿ. ಪ್ರತಾಪವರ್ಮನು ಸೈನ್ಯಾಧಿಕಾರಿಯಾಗಿರುತ್ತಾನೆ. ನೀನು ರಾಜದ್ರೋಹಕ್ಕೆ ತಲೆಹಾಕಿದರೆ ಪದವಿಯಿಂದ ತೊಲಗಿಸಲ್ಪಡುವಿ. ನೀನು ಹೇಳಿದುದನ್ನು ಸಾಧಿಸಿ ತೋರಿಸಿದ ಮೇಲೆಯೇ ನಿನಗೆ ಪ್ರತಾಪವರ್ಮನೊಂದಿಗೆ ಮದುವೆಯಾಗುತ್ತದೆ. ಇದಕ್ಕೆಲ್ಲ ಒಂದೇ ತಿಂಗಳು ಗಡು !" ಎಂದನು.



ಮಹಾರಾಜನು ಹೇಳಿದ ನಿಯಮಗಳಿಗೆ ಸುಹಾಸಿನಿ ಒಪ್ಪಿಕೊಂಡಳು. ಅವಳೇ ದೇಶಕ್ಕೆ ರಾಣಿಯೆಂದೂ, ಅವಳ ಮಾತನ್ನು ಎಲ್ಲರೂ ಪಾಲಿಸಿಕೊಳ್ಳಬೇಕೆಂದೂ ರಾಜ್ಯದೊಳಗೆಲ್ಲಾ ಸಾರಲಾಯಿತು, ರಾಜ್ಯಪಾಲನೆಯ ವ್ಯವಹಾರದಲ್ಲಿ ಮಹಾರಾಜನು ತಲೆ ಹಾಕದೆ, ಅಂತಃಪುರದಲ್ಲೇ ಇದ್ದು ಬಿಟ್ಟನು. ಸೈನ್ಯವೆಲ್ಲವೂ ಪ್ರತಾಪವರ್ಮನ ಅಧೀನದಲ್ಲಿದ್ದಿತು.

ರಾಣಿಯ ಅಧಿಕಾರ ಬಂದ ಕೂಡಲೇ ಸುಹಾಸಿನಿ ರಾಜ್ಯಪಾಲನೆಯ ವ್ಯವಹಾರದಲ್ಲಿ ಅಗತ್ಯವಿಲ್ಲದ ಖರ್ಚುಗಳನ್ನು ತಗ್ಗಿಸಿ, ಅದರಲ್ಲಿ ಉಳಿಯುವ ಧನಕ್ಕೆ ಸರಿದೂಗುವಂತೆ ಪ್ರಜೆಗಳ ಮೇಲಿನ ಕಂದಾಯವನ್ನು ತಗ್ಗಿಸಿದಳು, ಪ್ರಜೆಗಳಿಗೆ ಒಳಿತಾಗುವಂತಹ ಬೇರೆ ಕೆಲವುಕಾರ್ಯಗಳನ್ನು ಮಾಡಿಸಲು ಹಚ್ಚಿದಳು. ಅದರಿಂದ ಒಂದು ವಾರದಷ್ಟು ದಿನಗಳಲ್ಲಿ ಪ್ರಜೆಗಳ ಗೌರವಾಭಿಮಾನಗಳಿಗೆ ಪಾತ್ರಳಾದಳು.

ಅವಳು ತಾನು ರಾಣಿಯಾದ ಇಪ್ಪತ್ತನೇ ದಿನದಲ್ಲಿ ಮಹಾರಾಜನನ್ನೂ ಪ್ರತಾಪವರ್ಮನನ್ನೂ ನೋಡಿ, "ಈ ದಿನ ನನ್ನೊಂದಿಗೆ ನಗರ ಸಂಚಾರಕ್ಕೆ ಬನ್ನಿರಿ. ನಾನು ಸಾಧಿಸಿದ ಕಾರ್ಯಗಳನ್ನು ಸ್ವತಃ ನೋಡಬಹುದು " ಎಂದಳು.

ಮೂವರೂ ಮಾರು ವೇಷಗಳಲ್ಲಿ ನಗರ ಸಂಚಾರಕ್ಕೆ ಹೊರಟರು, ಆ ಸಮಯದಲ್ಲಿ ಸೂರ್ಯೋದಯವಾಗುತ್ತಾ ಇತ್ತು. ಸುಹಾಸಿನಿ ದಾರಿಯಲ್ಲಿ ಹೋಗುವ ಒಬ್ಬ ಮನುಷ್ಯನನ್ನು ನಿಲ್ಲಿಸಿ, " ಅದು ಯಾವ ದಿಕ್ಕೂ ? " ಎಂದು ಸೂರ್ಯನ ಕಡೆಗೆ ಕೈ ತೋರಿಸಿ ಕೇಳಿದಳು.

" ಪಶ್ಚಿಮ ದಿಕ್ಕು " ಎಂದು ಕೂಡಲೇ ಅವನು ಉತ್ತರ ಕೊಟ್ಟನು.

ಮಹಾರಾಜನಿಗೂ ಪ್ರತಾಪವರ್ಮನಿಗೂ ಉಂಟಾದ ಆಶ್ಚರ್ಯಕ್ಕೆ ಮೇರೆ ಇರಲಿಲ್ಲ. ಅವರು ಮತ್ತೆ ಕೆಲವು ಪುರಜನರ ಹತ್ತಿರ ಅದೇ ಪ್ರಶ್ನೆ ಮಾಡಿ ನೋಡಿದರು. ಎಲ್ಲರೂ ಸೂರ್ಯನು ಉದಯಿಸುವ ದಿಕ್ಕನ್ನು ಪಶ್ಚಿಮದಿಕ್ಕು ಎಂತಲೇ ಹೇಳಿದರು.

ಆಮೇಲೆ ಮೂವರೂ ನಗರದ ಮಧ್ಯದಲ್ಲಿ ಪ್ರವಹಿಸುವ ತಾರಾನದಿಯ ಬಳಿಗೆ ಹೋದರು. ಸುಹಾಸಿನಿ ಅಲ್ಲಿರುವ ಒಬ್ಬನನ್ನು ಕರೆದು, " ಈ ನದಿಯ ಹೆಸರೇನಪ್ಪಾ ?" ಎಂದು ಕೇಳಿದಳು.

" ಗಂಗಾನದಿ " ಎಂದನು ಅವನು.

ಅವನು ಮಾತ್ರವಲ್ಲ ; ರಾಜನೂ ಯುವರಾಜನೂ ಯಾರನ್ನು ಕೇಳಿದರೂ ಅದೇ ಉತ್ತರ ಬಂದಿತು.

ಆಗ ಸುಹಾಸಿನಿ ತಲೆಬಾಗಿ ವಿನಯದಿಂದ, "ಪ್ರಭುಗಳೇ, ನಾನು ಹೇಳಿದ ಕೆಲಸ ಸಾಧ್ಯವಾಗುವಂತಹುದೇ ಎಂದು ನಿರೂಪಿಸಿದ್ದೇನೆ " ಎಂದಳು.

" ಇದು ಬಹಳ ವಿಚಿತ್ರವೇ ಸರಿ. ಸೂರ್ಯನು ಎಂದಿನಂತೆಯೇ ಪೂರ್ವ ದಿಕ್ಕಿನಲ್ಲಿ ಉದಯಿಸಿದ್ದಾನೆ. ಆದರೆ ಜನರೆಲ್ಲಾ ಆ ದಿಕ್ಕನ್ನು ಪಶ್ಚಿಮವೆಂದು ಹೇಳುತ್ತಾರೆ, ನಗರದಲ್ಲಿ ಪ್ರವಹಿಸುವ ತಾರಾನದಿ

ಯನ್ನು ಗಂಗಾನದಿ ಎನ್ನುತ್ತಾರಲ್ಲ! ಇದು ಹೇಗೆ ಸಾಧ್ಯವಾಯಿತು ?" ಎಂದು ಕೇಳಿದನು ಮಹಾರಾಜ.

"ಮಹಾಪ್ರಭೂ, ನಾನು ಕೆಲವು ವರ್ಷಗಳಿಂದ ಯಾವ ವಿಧವಾದ ಪರಿಪಾಲನೆಯ ಪದ್ಧತಿಯ ಮೂಲಕ ಪ್ರಜೆಗಳಿಗೆ ಸುಖಸಂತೋಷಗಳುಂಟಾಗುತ್ತವೆಂಬ ವಿಷಯವನ್ನೇ ಯೋಚಿಸಿಕೊಂಡಿರುತ್ತಿದ್ದವಳು. ನಾನು ರಾಜಾಂತಃಪುರದಲ್ಲಿ ಹುಟ್ಟಿದವಳಲ್ಲವಷ್ಟೆ ? ಹಳ್ಳಿಯಲ್ಲೇ ಹುಟ್ಟಿ ಬೆಳೆದ ನನಗೆ ಪ್ರಜೆಗಳ ಕಷ್ಟವೇನೆಂಬುದು ಚೆನ್ನಾಗಿ ಗೊತ್ತು. ರಾಣಿಯ ಅಧಿಕಾರ ಬಂದ ಕೂಡಲೇ ಈ ಅವಕಾಶದಲ್ಲಿ ಪ್ರಜೆಗಳಿಗೆ ಮೇಲಾಗುವಂತಹ ಕೆಲವು ಯೋಜನೆಗಳನ್ನು ಕಾರ್ಯರೂಪಕ್ಕೆ ಇಳಿಸಿದೆನು. ಕೂಡಲೇ ಪ್ರಜೆಗಳಿಗೆ ನನ್ನ ಮೇಲೆ ಆದರಣೆ ಉಂಟಾಯಿತು. ಮತ್ತೊಂದು ವಾರದಲ್ಲಿ ಜನರಿಗೆಲ್ಲ ನನ್ನ ಮೇಲೆ ಆರಾಧನೆಯ ಭಾವ ಉಂಟಾಯಿತು, ಇದನ್ನೇ ನನ್ನ ಪಂಥಕ್ಕೆ ಉಪಯೋಗಿಸಿ, 'ರಾಣಿಯ ಆರೋಗ್ಯ ಕೆಟ್ಟಿದೆ. ಆಕೆಗೆ ಬೇಗನೇ ಗುಣವಾಗ ಬೇಕಾದರೆ ಎಲ್ಲರೂ ಪೂರ್ವ ದಿಕ್ಕನ್ನು ಪಶ್ಚಿಮ ದಿಕ್ಕು ಎಂದೇ ಹೇಳಬೇಕು. ನಗರದಲ್ಲಿರುವ ತಾರಾನದಿಯನ್ನು ಗಂಗಾನದಿಯೆಂದೇ ಕರೆಯಬೇಕು. ಹೀಗೆ ನೀರನ್ನೆಲ್ಲಾ ಗಂಗೆ ಎನ್ನುವುದರಿಂದ, ಸೂರ್ಯನ ವಿಶ್ರಾಂತಿಯ ದಿಕ್ಕನ್ನೇ ಎಲ್ಲರೂ ಹೇಳುವುದರಿಂದ ಆ ದೇವತೆಗಳಿಬ್ಬರೂ ಪ್ರಸನ್ನರಾಗಿ ರಾಣಿಯ ಆರೋಗ್ಯವನ್ನು ಕಾಪಾಡುತ್ತಾರೆ' ಎಂದು ಉದ್ಯೋಗಸ್ಥರ ಮೂಲಕ ಪ್ರಚಾರ ಮಾಡಿಸಿದೆನು" ಎಂದಳು ಸುಹಾಸಿನಿ.

ಪ್ರತಾಪವರ್ಮನು ಚಪ್ಪಾಳೆ ತಟ್ಟಿ "ಭಲೆಭಲೆ! ಇದಿಷ್ಟು ಸುಲಭವೆಂದು ನನಗೆ ತಿಳಿಯಲೇ ಇಲ್ಲ" ಎಂದನು.

ಮಹಾರಾಜನು ಗಂಭೀರವಾಗಿ "ಸುಹಾಸಿನೀ, ನಾನು ನಿನ್ನನ್ನು ಸೊಸೆಯಾಗಿ ಸ್ವೀಕರಿಸುತ್ತೇನೆ. ಅದು ನನ್ನ ಮಾತು ಉಳಿಸಿಕೊಳ್ಳಲಿಕ್ಕೋ, ನಿನ್ನ ಬುದ್ಧಿವಂತಿಕೆಗೆ ಮೆಚ್ಚಿಯೋ ಅಲ್ಲ. ಕೆಲವೇ ದಿನಗಳಲ್ಲಿ ನೀನು ಪ್ರಜೆಗಳ ಪ್ರೇಮ, ಆದರ ಗೌರವಗಳನ್ನು ಸಂಪಾದಿಸಿ ಅವರ ಆರಾಧ್ಯ ದೈವದಂತಾದುದರಿಂದಲೇ. ನಿನ್ನಂಥವಳೇ ಮಹಾರಾಣಿಯಾಗಿರಲು ತಕ್ಕವಳು. ನಿನ್ನನ್ನು ರಾಣಿಯನ್ನಾಗಿ ಮಾಡುವುದರಿಂದ ನಾನೂ ಪ್ರಜೆಗಳ ಆದರಣೆಗೆ ಪಾತ್ರನಾಗುತ್ತೇನೆ" ಎಂದು ಹೇಳಿದನು.

ಆಮೇಲೆ ಶುಭದಿನದಲ್ಲಿ ಪ್ರತಾಪವರ್ಮನೊಂದಿಗೆ ಸುಹಾಸಿನಿಯ ಮದುವೆ ಬಹು ವೈಭವದಿಂದ ನಡೆಯಿತು. ಪ್ರತಾಪವರ್ಮನು ರಾಜನಾದರೂ ಸೈನ್ಯಾಧಿಕಾರದಲ್ಲೇ ಇದ್ದು, ಪರಿಪಾಲನೆಯ ಬಾಧ್ಯತೆಗಳನ್ನು ಸುಹಾಸಿನಿಗೇ ಬಿಟ್ಟನು. ಅಂತೆಯೇ ಒಳ್ಳೆಯ ರಾಜನೆಂದು ಅವನಿಗೂ ಹೆಸರು ಬಂತು.





# ಗಡ್ಡಮಂತ್ರಿ

ಅನೇಕ ದ್ವೀಪ ರಾಜ್ಯಗಳಲ್ಲಿ ಪುಷ್ಕರ ದ್ವೀಪವೂ ಕ್ರೌಂಚ ದ್ವೀಪವೂ ನೆರೆಹೊರೆಯ ದ್ವೀಪ ರಾಜ್ಯಗಳು. ಕ್ರೌಂಚ ದ್ವೀಪದ ರಾಜನಿಗೆ ಎಲ್ಲಾ ದ್ವೀಪ ರಾಜ್ಯಗಳ ಅರಸರೂ ಮಿತ್ರರಾಗಿದ್ದರು. ಆದರೆ ಪುಷ್ಕರ ದ್ವೀಪದ ರಾಜನು ಮಾತ್ರ ಕಡಿಯಲಾಗದ ಕಡಲೆಯಂತೆ ಗಟ್ಟಿಯಾಗಿದ್ದನು. ಅವನನ್ನು ಕೂಡಾ ಮಿತ್ರನಾಗಿ ಮಾಡಿಕೊಳ್ಳಬೇಕೆಂದು ಕ್ರೌಂಚ ದ್ವೀಪದ ರಾಜನು ಯಾವಾಗಲೂ ಯೋಚಿಸಿಕೊಂಡಿದ್ದನು. ಅದಕ್ಕೆ ತಕ್ಕ ಸಮರ್ಥರು ಯಾರೆಂಬುದು ಅವನಿಗೆ ಹೊಳೆಯಲಿಲ್ಲ, ಪುಷ್ಕರ ದ್ವೀಪದ ರಾಜನು ಕ್ರೌಂಚ ದ್ವೀಪವನ್ನು ನಿಕೃಷ್ಟವಾಗಿ ಕಾಣುವವನು. ಅವನಿಗೆ ಎಲ್ಲರನ್ನೂ ಲೇವಡಿ ಮಾಡುವ ಗುಣ, ಅಂಥವನು ಬೇರೆಯವರಿಗೆ ಕ್ರೌಂಚ ದ್ವೀಪದ ಮೇಲೆ ಅಪಾರ್ಥ ಉಂಟಾಗುವ ಹಾಗೆ ಮಾತಾಡಿ, ಕೇಡಿಗೆ ಕಾರಣನಾಗಲೂ ಬಹುದು. ಸ್ನೇಹ ಮಾಡಿಕೊಂಡರೆ ಆ ಭಯವಿಲ್ಲ.

ಹೀಗೆಲ್ಲ ಯೋಚಿಸಿದ ಮೇಲೆ, ಮಹಾ ಮಂತ್ರಿ ದೂರದರ್ಶಿಯನ್ನು ಈ ಕಾರ್ಯಕ್ಕೆ ಕಳುಹಿಸುವುದೇ ಒಳ್ಳೆಯದೆಂದು ಕ್ರೌಂಚ ದ್ವೀಪದ ರಾಜನಿಗೆ ತೋರಿತು.

ಪುಷ್ಕರ ದ್ವೀಪದ ರಾಜನಿಗೆ ತನ್ನಷ್ಟು ಬುದ್ಧಿವಂತರು ಯಾರೂ ಇಲ್ಲವೆಂಬುದೇ ಅವನ ಲೇವಡಿಗೂ ಗರ್ವಕ್ಕೂ ಕಾರಣವಾಗಿತ್ತು. ರಾಯಭಾರಿಯಾಗಿ ಬರುವವನನ್ನು ಅವಮಾನಪಡಿಸಿ, ಹೆದರಿಸಿ ಹಿಂದಿರುಗಿಸಿ ಬಿಡಬೇಕೆಂದು ಆಲೋಚಿಸಿದನು.

ದೂರದರ್ಶಿ ಕೋಟೆಯ ಸಿಂಹದ್ವಾರದ ಬಳಿಗೆ ಬರುವಷ್ಟರಲ್ಲಿ ಭಟರು ಬೇಗಬೇಗನೆ ಬಾಗಿಲನ್ನು ಮುಚ್ಚಿಬಿಟ್ಟರು. ಪುಷ್ಕರದ ರಾಜನೂ ಅಲ್ಲಿಗೇ ಬಂದು ಕಿಲಕಿಲನೆ ನಗುತ್ತ, "ಆ ಹೆಬಗ ರಾಯಭಾರಿಗೆ ಒಳಗೆ ಬರಬೇಕಾಗಿದ್ದರೆ, ಬಾಗಿಲಿನ ಪಕ್ಕದಲ್ಲಿ ನಾಯಿಗಳು ಪ್ರವೇಶಿಸುವ ತೂತು ಇದೆಯಲ್ಲಾ, ಅದರಲ್ಲಿ ನುಸುಳಿ ಬರುತ್ತಾನಾದರೆ ಬರಲಿ! ಅದಕ್ಕೇನೂ ಅಭ್ಯಂತರವಿಲ್ಲವೆಂದು ಹೇಳು" ಎಂದನು ಸಿಂಹಾಸನದ ಮೇಲೆ ಕುಳಿತುಕೊಂಡು. ಸುತ್ತಲೂ ಇದ್ದವರೆಲ್ಲಾ ಗೊಳ್ಳನೆ ನಕ್ಕರು.

ಅದನ್ನು ಕೇಳಿ ದೂರದರ್ಶಿ ರಾಜನಿಗೆ ದೂರದಿಂದಲೇ ವಂದಿಸಿ. "ಅಪ್ಪಣೆ ಮಹಾ ಪ್ರಭುಗಳೇ. ನಿಮ್ಮದು ಯಾರಿಗೆ ಸಂಬಂಧಿಸಿದ ದೇಶವೋ ಅವರೆಲ್ಲಾ ಹೋಗಿಬರುವ ದ್ವಾರವೇ ನಮಗೆ ಸಾಕು.

ನಾವು ಮನುಷ್ಯರ ದೇಶಕ್ಕೆ ಮನುಷ್ಯರ ಬಾಗಿಲಿನಲ್ಲಿಯೂ, ನಾಯಿಗಳ ದೇಶಕ್ಕೆ ನಾಯಿಗಳ ಬಾಗಿಲಿನಲ್ಲಿಯೂ ಪ್ರವೇಶಿಸುವುದೇ ನಮಗೆ ನ್ಯಾಯ. ಸ್ನೇಹವೇ ನಮ್ಮ ಗುರಿ " ಎಂದು ಹೇಳಿದನು.

ಪುಷ್ಕರಪಾಲಕನ ಮುಖ ಬಿಳಿಚಿತು. ಅವನು ದೂರದರ್ಶಿಯನ್ನು ಸಿಂಹದ್ವಾರದಿಂದಲೇ ಬರಮಾಡಿಸಿಕೊಂಡನು. ಅವನಿಗೆ ತನ್ನ ಪಕ್ಕದಲ್ಲಿ ಕುರ್ಚಿಯನ್ನೂ ಇಡಿಸಿದನು.

ದೂರದರ್ಶಿ ಬಹಳ ಗಿಡ್ಡಗಿದ್ದನು. ಕುರ್ಚಿಯಲ್ಲಿ ಕುಳಿತರೆ ಅರ್ಧ ಭಾಗಕ್ಕೂ ಬಾರದವನು. ಮತ್ತೆ ಅವನಿಗೆ ಅವಮಾನ ಮಾಡಬೇಕೆಂದು ಪುಷ್ಕರ ರಾಜನು, " ನಿಮ್ಮ ಬುದ್ಧಿಯು ಹಾಗೆಯೇ ನಿಮ್ಮ ರಾಜ್ಯದ ಜನರೆಲ್ಲಾ ಗಿಡ್ಡರೇ ಏನು ? " ಎಂದನು.

ಕೂಡಲೇ ದೂರದರ್ಶಿ ಮಂತ್ರಿ " ರಾಜಾ, ನಮ್ಮ ದೇಶದಲ್ಲಿ ಬಗೆ ಬಗೆಯ ಮನುಷ್ಯರಿದ್ದಾರೆ, ನಾವು ಒಂದು ನಿಯಮವನ್ನು ಇಟ್ಟುಕೊಂಡಿದ್ದೇವೆ. ಅಲ್ಪರ ಬಳಿಗೆ ಗಿಡ್ಡರನ್ನೂ, ದೊಡ್ಡವರ ಬಳಿಗೆ ದೊಡ್ಡವರನ್ನೂ ಕಳುಹಿಸಬೇಕೆಂಬುದು ನಮ್ಮ ಪದ್ಧತಿ. ಆದಕ್ಕೇ ನನ್ನನ್ನು ಇಲ್ಲಿಗೆ ಕಳುಹಿಸಿದ್ದಾರೆ. ಎಲ್ಲಾ ದೇವರ ಸೃಷ್ಟಿ ತಾನೇ ? ಸ್ನೇಹವೇ ನಮ್ಮ ಗುರಿ " ಎಂದನು.

ಪುಷ್ಕರ ರಾಜನ ಮುಂದೆ ಪಟಾಕಿ ಸಿಡಿದಹಾಗಾಯಿತು. ಗಿಡ್ಡನ ಮಾತಿನ ರಭಳಕಾಯಿಸಿಟ್ಟಂತಾಯಿತು.

ಈ ಗಿಡ್ಡ ಮಂತ್ರಿಯನ್ನು ಹೇಗೆ ಅಡಗಿಸುವುದೆಂದು ಪುನಃ ಆಲೋಚನೆಗೆ ತೊಡಗಿದನು ಆ ರಾಜ.

ಆಗ ಕೆಲಮಂದಿ ಭಟರು ಒಬ್ಬ ಖೈದಿಯನ್ನು ಹಿಡಿದುಕೊಂಡು, ಇವನು ಕ್ರಾಂಚ ದ್ವೀಪದವನೆಂದೂ, ಕಳ್ಳತನ ಮಾಡಿದನೆಂದೂ ಫಿರ್ಯಾದಿ ಮಾಡಿದರು.

ಆದನ್ನು ಕೇಳಿ ಪುಷ್ಕರದ ರಾಜನು ಹೇಳನೆಯಾಗಿ, " ವಿನೋಯ್, ಕ್ರೌಂಚ ಮಂತ್ರೀ ! ನಿಮ್ಮ ರಾಜ್ಯದಲ್ಲಿರುವವರೆಲ್ಲರೂ ಕಳ್ಳರೇ ಏನು ? " ಎಂದನು.

ಕೂಡಲೇ ಕ್ರೌಂಚಮಂತ್ರಿ, " ಅದು ನಿಮ್ಮ ಮಣ್ಣಿನ ಪ್ರಭಾವ ಮಹಾರಾಜರೇ, ಅದರ ಮೇಲೆ ಕಾಲಿಟ್ಟ ಕೂಡಲೇ ಈ ರಾಜ್ಯದವರ ಬುದ್ಧಿಯೇ ನಿಮ್ಮ ರಾಜ್ಯದಲ್ಲಿ ಬಂದುಬಿಡುತ್ತದೆ. ನಮ್ಮ ರಾಜ್ಯದಲ್ಲಿ ಕಳ್ಳತನದ ಗಾಳಿಕೂಡಾ ಇಲ್ಲ. ನಿಮ್ಮವರು ಬಂದರೂ ಅಲ್ಲಿ ಕಳ್ಳತನ ಮಾಡಲಾರರು. ಆದಕ್ಕೇ ಸ್ನೇಹದ ರಾಯಭಾರಕ್ಕೆ ಬಂದಿದ್ದೇನೆ " ಎಂದನು.

ಈ ಮಾತು ಕ್ರೌಂಚ ರಾಜನ ತಲೆಗೆ ನಾಟಿತು. " ಹಾಗಾದರೆ ನೋಡಿಬಿಡೋಣ, ನಿಮ್ಮ ರಾಜ್ಯದೊಂದಿಗೆ ಸ್ನೇಹಮಾಡಿಕೊಳ್ಳೋಣ " ಎಂದನು ನಗುತ್ತಾ.

ಗಿಡ್ಡ ಮಂತ್ರಿ ದೂರದರ್ಶಿ ಬಂದ ಕಾರ್ಯವು ಸಿದ್ಧಿಸಿತು. ಒಳ್ಳೆಯ ಸ್ನೇಹ ಒಪ್ಪಂದ ಮಾಡಿಕೊಂಡು ಅವನು ಹಿಂದಿರುಗಿದನು.







ದ್ವೈತ ಮತ್ತು ತ್ರೇತಾಯುಗಗಳಾದ ಮೇಲೆ ಬರುವ ದ್ವಾಪರಯುಗದಲ್ಲಿ ಬಹು ಹೆಚ್ಚಿನ ಸಂಖ್ಯೆಯಲ್ಲಿ ರಾಕ್ಷಸರು ಮನುಷ್ಯರಾಗಿ ಹುಟ್ಟಿದುದರಿಂದ ಭೂಮಿಗೆ ಭಾರ ಹೆಚ್ಚಾಯಿತು. ಭೂದೇವಿ ಅಂತಹ ಕೆಟ್ಟ ಭಾರವನ್ನು ಹೊರಲಾಗದೆ, ಅದರಿಂದಾಗುವ ಬಾಧೆಯನ್ನು ತಾಳಲಾಗದೆ ದೇವತೆಗಳ ಆಲೋಚನೆಯಂತೆ, ವಿಷ್ಣುವಿನ ಹತ್ತಿರ ಹೋಗಿ ತನ್ನ ಕಷ್ಟವನ್ನು ಮೊರೆಯಿಟ್ಟುಕೊಂಡಳು.

"ದೇವೀ, ಸ್ವಲ್ಪ ಸಹನೆಯಿಂದಿರು. ನಾನು ಕೃಷ್ಣಾವತಾರವನ್ನೆತ್ತಿ ನಿನ್ನ ದುಃಖವನ್ನು ಪರಿಹರಿಸುತ್ತೇನೆ" ಎಂದು ಅಭಯವಿತ್ತನು ವಿಷ್ಣು. ಈ ಅಭಯ ವಚನದಿಂದಲೇ ಭೂದೇವಿಯ ಅರ್ಧಭಾರ ಕಡಿಮೆಯಾಯಿತು.

ಆದಿಕಾಲದಿಂದಲೇ ವಿಷ್ಣುವಿಗೆ ಪ್ರಬಲ ಶತ್ರುವಾದ ಕಾಲನೇಮಿ ರಾಕ್ಷಸನು ಕಂಸನಾಗಿ ಭೂಮಿಯಲ್ಲಿ ಹುಟ್ಟಿ ಬಂದನು. ಈ ಕಂಸನ ತಂದೆ ಮಥುರಾನಗರವನ್ನಾಳುವ ಉಗ್ರಸೇನ ಮಹಾರಾಜ.

ಕಂಸನು ಉಗ್ರಸೇನನ ಮಗನಾಗಿ ಹುಟ್ಟಿದುದೇ ಒಂದು ವಿಚಿತ್ರ ರೀತಿಯಲ್ಲಿ, ಉಗ್ರಸೇನನು ವಿವಾಹವಾದ ಮೇಲೆ ಸ್ವಲ್ಪ ಕಾಲ ಹೆಂಡತಿಯನ್ನು ಬಿಟ್ಟಿದ್ದನು. ವಿರಹತಾಪದಲ್ಲಿದ್ದ ರಾಣಿಯನ್ನು ರಾಕ್ಷಸನೊಬ್ಬನು ಉಗ್ರಸೇನನ ರೂಪತಾಳಿ ಮೋಸಪಡಿಸಿದನು. ಆಗಲೇ ಕಾಲನೇಮಿ ಅವಳ ಗರ್ಭವನ್ನು ಪ್ರವೇಶಿಸಿ ಕಂಸನಾಗಿ ಹುಟ್ಟಿದ್ದನು. ಹೀಗಾಗಿ ಸಾತ್ವಿಕ ಗುಣಗಳಿರುವ ಉಗ್ರಸೇನನು ಕೆಟ್ಟ ಮಗನ ತಂದೆ ಎನಿಸಿಕೊಳ್ಳಬೇಕಾಯಿತು.

ದೇವಾಸುರರ ಯುದ್ಧದಲ್ಲಿ ದಾನವರಿಗೆ ನಾಯಕನಾಗಿ ವಿಷ್ಣುವಿನೊಂದಿಗೆ ಹೋರಾಡಿದ ವಿಪ್ರಚಿತ್ತಿ ರಾಜನೇ ಮಗಧ ರಾಜ್ಯವನ್ನಾಳುವ ಜರಾಸಂಧನಾಗಿ ಹುಟ್ಟಿದನು. ಜರಾಸಂಧನು ಮಹಾ ಕ್ರೂರನೂ, ದೊಡ್ಡ ಬಲಶಾಲಿಯೂ ಆಗಿದ್ದನು. ಈ ಜರಾಸಂಧನು ರಾಜರನ್ನೆಲ್ಲ ಸೆರೆ ಹಿಡಿದು ತಂದು, ತಾನು ಪೂಜಿಸುವ ಭೈರವನಿಗೆ ಬಲಿಗೊಟ್ಟು ನೈವೇದ್ಯ ಮಾಡುತ್ತಿದ್ದನು. ಕಂಸನು ಜರಾಸಂಧನ ಅಳಿಯನಾಗಿದ್ದನು.



ಉಗ್ರಸೇನನ ತಮ್ಮನ ಕುಮಾರಿಯಾದ ದೇವಕಿಗೆ ಯದುವಂಶದ ರಾಜನಾದ ವಸುದೇವನೊಂದಿಗೆ ವಿವಾಹವಾಯಿತು, ಆ ಸಂದರ್ಭದಲ್ಲಿ ಒಂದು ವಿಚಿತ್ರ ಸಂಭವ ಘಟಿಸಿತು. ಹೊಸತಾಗಿ ಮದುವೆಯಾದ ದಂಪತಿಗಳನ್ನು ಕಂಸನು ರಥದ ಮೇಲೆ ಕುಳ್ಳಿರಿಸಿ ಕೊಂಡು ಬರುತ್ತಿದ್ದಾಗ, 'ಈ ದೇವಕಿಯ ಎಂಟನೇ ಸಂತಾನದಿಂದ ಕಂಸನು ಕೊಲ್ಲಲ್ಪಡುತ್ತಾನೆ' ಎಂದು ಆಕಾಶವಾಣಿ ಧ್ವನಿಸಿತು,

ಆಗ ಕಂಸನು ದೇವಕಿಯನ್ನು ಕೊಲ್ಲಲು ನೋಡಿದನು. ವಸುದೇವನು ಅಡ್ಡಬಂದು, ಬಹು ದೀನನಾಗಿ ಬೇಡಿಕೊಂಡನು. ದೇವಕಿ ಪ್ರಸವಿಸುವ ಶಿಶುಗಳನ್ನು ಕಂಸನಿಗೆ ಕೊಡುವೆನೆಂದು ಮಾತು ಕೊಟ್ಟನು. ಆದರಂತೆ ಆರು ಶಿಶುಗಳನ್ನು ಕಂಸನಿಗೆ ಕೊಟ್ಟುಬಿಟ್ಟನು ವಸುದೇವ.

ದೇವಕಿಯ ಏಳನೇ ಗರ್ಭದಲ್ಲಿ ವಿಷ್ಣುವಿನ ಆಜ್ಞೆಯಂತೆ ಆದಿಶೇಷನು ತನ್ನ ಅಂಶವನ್ನು ಸೇರಿಸಿದನು. ಆ ಪಿಂಡವನ್ನು ಗೋಕುಲದಲ್ಲಿದ್ದ ವಸುದೇವನ ಇನ್ನೊಬ್ಬಳು ಹೆಂಡತಿಯಾದ ರೋಹಿಣಿಯ ಗರ್ಭದೊಳಗೆ ಸೇರಿಸಿಬಿಟ್ಟನು ವಿಷ್ಣು. ಅನಂತರ ಯೋಗ ಮಾಯೆಯನ್ನು ನಂದಗೋಪನ ಹೆಂಡತಿಯಾದ ಯಶೋದೆಯ ಗರ್ಭದಲ್ಲಿ ಹುಟ್ಟುವಂತೆ ಆಜ್ಞೆ ಮಾಡಿದನು.

ಆದರಂತೆ ದೇವಕಿಯ ಏಳನೇ ಗರ್ಭವು ಪ್ರಸವವಾಗದೆ ಇಂಗಿಹೋಯಿತು. ಅನಂತರ ಎಂಟನೇ ಬಾರಿ ದೇವಕಿ ಗರ್ಭಿಣಿಯಾಗಿರುವಳೆಂದು ತಿಳಿದ ಕೂಡಲೇ, ಈ ಶಿಶುವೇ ತನ್ನನ್ನು ಕೊಲ್ಲುವಂತಹುದೆಂದುಕೊಂಡು ಕಂಸನು ದೇವಕೀ ವಸುದೇವರನ್ನು ಕಾರಾಗೃಹದಲ್ಲಿ ಇರಿಸಿದನು.

ಶ್ರಾವಣಮಾಸ, ಕೃಷ್ಣಪಕ್ಷ ಅಷ್ಟಮಿಯದಿನ, ಚಂದ್ರನು ರೋಹಿಣೀ ನಕ್ಷತ್ರದೊಂದಿಗೆ ಇರುವಾಗ, ಮಧ್ಯರಾತ್ರಿಯ ಹೊತ್ತಿನಲ್ಲಿ ಕಾವಲಿನ ಭಟರು ಅವರಿಗೆ ತಿಳಿಯದಂತೆಯೇ ನಿದ್ದೆಯ ಮತ್ತಿನಲ್ಲಿ ಬಿದ್ದಿದ್ದರು.

ಆ ಸಮಯದಲ್ಲಿ ದೇವಕಿ ಗಂಡು ಮಗುವನ್ನು ಪ್ರಸವಿಸಿದಳು. ವಿಷ್ಣುವೇ ಅವಳ ಮಗನಾಗಿ ಅವತರಿಸಿ ಕೃಷ್ಣನೆನಿಸಿದನು. ಆಗ ಸೆರೆಮನೆಯ ಬಾಗಿಲು ತಾನಾಗಿ ತೆರೆಯಿತು.

ವಿಷ್ಣುವಿನ ಆದೇಶದಂತೆ ವಸುದೇವನು ಶಿಶು ಕೃಷ್ಣನನ್ನು ಎತ್ತಿಕೊಂಡು ಯಮುನಾ ನದಿಯನ್ನು ದಾಟಿ ಗೋಕುಲಕ್ಕೆ ಹೋದನು.

ಅದೇ ಸಮಯದಲ್ಲಿ ಗೋಕುಲದಲ್ಲಿ ಎಲ್ಲರನ್ನೂ ಮಾಯಾನಿದ್ರೆ ಆವಹಿಸಿರಲು, ಏನೂ ನೋವಿಲ್ಲದಂತೆ ನಿದ್ದೆಯಲ್ಲಿಯೇ ಹೆಣ್ಣು ಮಗುವನ್ನು ಹಡೆದ ಯಶೋದೆಯ ಬದಿಯಲ್ಲಿ ವಸುದೇವನು ಕೃಷ್ಣ ಶಿಶುವನ್ನು ಇಟ್ಟು, ಪ್ರಾಣವಿಲ್ಲದಂತಹ ಯಶೋದೆಯ ಹೆಣ್ಣು ಮಗುವನ್ನು ಎತ್ತಿಕೊಂಡು ಅಲ್ಲಿಂದ ಹೊರಟುಹೋದನು.



ಇದ್ದಕ್ಕಿದ್ದ ಹಾಗೆ ಸೆರೆಮನೆಯೊಳಗೆ ದಿಕ್ಕುಗಳನ್ನು ಕೊರೆಯುವಂತೆ ಆ ಹೆಣ್ಣು ಮಗು ಕ್ಯಾರು ಕ್ಯಾರೆಂದು ಕೂಗಿತು.

ಕೂಡಲೇ ಓಡಿ ಬಂದ ಕಂಸನು ಆ ಶಿಶುವನ್ನು ಎತ್ತಿಕೊಂಡು ಹೋಗಿ ವಧ್ಯಶಿಲೆಯ ಮೇಲೆ ಹೊಡೆದು ಕೊಲ್ಲಲು ಎತ್ತಿದನು. ಆಗ ಆ ಶಿಶು ಫಕ್ಕನೆ ಅವನ ಕೈಯಿಂದ ಜಾರಿ ಮೇಲಕ್ಕೆ ಹಾರಿ ಕಿಲಕಿಲನೆ ನಕ್ಕು, "ಎಲೋ ಕಂಸಾ! ನಿನ್ನನ್ನು ಕೊಲ್ಲುವವನು ಕ್ಷೇಮವಾಗೇ ಇದ್ದಾನೆ!" ಎಂದು ಹೇಳಿ ದುರ್ಗಾದೇವಿಯಾಗಿ ತೋರಿ, ಮರುಕ್ಷಣದಲ್ಲಿ ಮಾಯವೂ ಆಯಿತು.

ಗೋಕುಲದಲ್ಲಿ ಕೃಷ್ಣನು ಹುಟ್ಟಿದನೆಂದು ಸಂಭ್ರಮವಾಯಿತು. ಕೃಷ್ಣಾಷ್ಟಮಿ ಎಂದೂ, ಗೋಕುಲಾಷ್ಟಮಿ ಎಂದೂ ಆ ದಿನವು ಕೊಂಡಾಡಲ್ಪಟ್ಟಿತು. ಅದಕ್ಕೆ ಮೊದಲೇ ಕೃಷ್ಣನಿಗೆ ಅಣ್ಣನಾಗಿ ರೋಹಿಣಿಗೆ ಬಲರಾಮನು ಹುಟ್ಟಿದ್ದೂ ಆಗಿತ್ತು.

ಒಂದು ದಿನ ನಾರದನು ಕಂಸನ ಬಳಿಗೆ ಬಂದು, "ಕಂಸಾ, ನೀನು ಉಗ್ರಸೇನನ ಕುಮಾರನಾಗಿ ಕಂಡರೂ ನಿಜಕ್ಕೂ ನೀನು ಕಾಲನೇಮಿ, ನಿನ್ನನ್ನು ಕೊಲ್ಲಬೇಕೆಂದು ಹುಟ್ಟಿದ ಆ ವಿಷ್ಣು ಎಲ್ಲಿಯೋ ಇದ್ದಾನೆಂದು ಕೇಳಿರುವಿಯಷ್ಟೆ? ಸುಮ್ಮನಿರಬೇಡ. ನಿನ್ನ ಕರೆಯನ್ನು ಕಾಯುತ್ತ ಲೋಕದೊಳಗಿನ ನಿನ್ನ ಕಡೆಯ ರಾಕ್ಷಸರೆಲ್ಲಾ ಎದುರು ನೋಡುತ್ತಿದ್ದಾರೆ" ಎಂದು ಜಾಗ್ರತೆ ಹೇಳಿ ಹೋದನು.

ಇದರಿಂದ ಭೀತನಾದ ಕಂಸನು ಅಧಿಕಾರವಿಲ್ಲದೆ ಏನೂ ಮಾಡಲಾಗದೆಂದುಕೊಂಡು, ಮೊದಲು ತಂದೆಯಾದ ಉಗ್ರಸೇನನನ್ನು ಕಾರಾಗೃಹದಲ್ಲಿ ಬಂಧಿಸಿ ಸಿಂಹಾಸನವನ್ನು ಆಕ್ರಮಿಸಿಕೊಂಡನು.

ಹೀಗೆ ಕೇಳುವವರಿಲ್ಲದೆ ವಾತಾವರಣವು ತನಗೆ ತಕ್ಕಂತೆ ಸರಿಯಾದ ಮೇಲೆ ಎಲ್ಲೆಲ್ಲಿದ್ದ ರಾಕ್ಷಸರನ್ನೆಲ್ಲಾ ತನ್ನ ಬಳಿಗೆ ಕರೆಯಿಸಿ ಆಪ್ತರನ್ನಾಗಿ ಮಾಡಿಕೊಂಡನು. ಹುಟ್ಟಿದ ಹಸುಕಂದಗಳನ್ನು ಕೊಲ್ಲಲು ಮಾಯಾವಿನಿಯಾದ ಪೂತನಿಯನ್ನು ಕಳುಹಿಸಿದನು.

ಆ ರಕ್ಕಸಿ ಪೂತನಿ ಊರೊಳಗಿನ ಮಕ್ಕಳನ್ನು ಕೊಲ್ಲುತ್ತ ಮಾನವ ಸ್ತ್ರೀಯ ರೂಪದಲ್ಲಿ ಗೋಕುಲಕ್ಕೆ ಹೋದಳು. ಕೃಷ್ಣನಿಗೂ ವಿಷದ ಹಾಲು ಕುಡಿಸಲು, ಆ ಪೂತನಿ ಕೃಷ್ಣನನ್ನು ಎತ್ತಿಕೊಂಡಾಗ, ಕೃಷ್ಣನು ಅವಳ ಪ್ರಾಣವನ್ನೇ ಹೀರಿಕೊಂದು ಹಾಕಿದನು.

ಆಮೇಲೆ ಕಂಸನು ಕಳುಹಿಸಿದ ತೃಣಾವರ್ತನೆಂಬ ರಾಕ್ಷಸನು ಸುಳಿಗಾಳಿಯಾಗಿ ಕೃಷ್ಣನನ್ನು ಆಕಾಶಕ್ಕೆ ಎತ್ತಿಕೊಂಡು ಹೋಗಲು, ಕೃಷ್ಣ ಶಿಶು ಅವನನ್ನೂ ಕೊಂದಿತು. ಬಂಡಿಯಾಗಿ ಮುಗಿಬಿದ್ದ ಶಕಟಾಸುರನನ್ನೂ, ಕೃಷ್ಣನು ತುಳಿದು ಚೂರು ಚೂರು ಮಾಡಿದನು. ಯಶೋದೆ ಅದ್ಭುತ ಶಕ್ತಿಯುಳ್ಳ ತನ್ನ ಮಗ ಕೃಷ್ಣನನ್ನು ಅತ್ಯಂತ ಮುದ್ದಿನಿಂದ ಬೆಳೆಸುತ್ತ ಸಂತೋಷಪಡುತ್ತಿದ್ದಳು.



ಬಾಲಕೃಷ್ಣನು ದೊಡ್ಡ ತಂಟೆಗಾರನಾಗಿ, ಪುಂಡಾಟ ಮಾಡುತ್ತ ಪ್ರತಿಯೊಬ್ಬರ ಮನೆಯಿಂದಲೂ ಬೆಣ್ಣೆ ಕದ್ದು ತಿನ್ನುತ್ತಿದ್ದನು.

ಕೃಷ್ಣನ ಬಾಲಲೀಲೆಗಳಿಗೆ ತುದಿ ಮೊದಲಿರಲಿಲ್ಲ, ಕೃಷ್ಣಲೀಲೆಗಳಿಂದ ಗೋಕುಲ ತುಂಬಾ ಆನಂದತರಂಗ ಮಯವಾಗಿ ಹೋಯಿತು.

ಎಡೆಯೆಡೆಯಲ್ಲಿ ಕೃಷ್ಣನ ತಂಟೆ ತಾಳಲಾಗದಂತಾಗುತ್ತಿತ್ತು. ಒಮ್ಮೆ ಯಶೋದೆ ಕೃಷ್ಣನನ್ನು ಒರಳಿಗೆ ಕಟ್ಟಿ ಹಾಕಿದಳು. ಕೃಷ್ಣನು ಎರಡು ಜಂಟಿ ಮರಗಳ ಸಂದಿನಲ್ಲಿ ತೂರಿ ಆ ಮರಗಳನ್ನು ಬೇರಿನೊಂದಿಗೆ ಉರುಳಿಸಿ, ಗಂಧರ್ವರನ್ನು ಶಾಪದಿಂದ ಮುಕ್ತ ಗೊಳಿಸಿದನು.

ಮಣ್ಣು ತಿಂದನೆಂಬ ದೂರುಕೇಳಿ, ಯಶೋದೆ ಬಾಯಿ ತೋರಿಸಲು ಹೇಳಿದಾಗ, ಅವಳಿಗೆ ತನ್ನ ಬಾಯಿಯೊಳಗೆ ವಿಶ್ವರೂಪವನ್ನೇ ತೋರಿಸಿ ಬೆರಗಾಗಿಸಿದನು ಬಾಲಕೃಷ್ಣ.

ಕಾಳೀಯ ಮಹಾಸರ್ಪದ ಹೆಡೆಗಳ ಮೇಲೆ ಕೃಷ್ಣನು ತಾಂಡವ ನೃತ್ಯಮಾಡಿ ಅದನ್ನು ಮರ್ದನ ಮಾಡಿ ಓಡಿಸಿದನು.

ಗೋಕುಲ ನಿವಾಸಿಗಳೆಲ್ಲಾ ಬೃಂದಾವನಕ್ಕೆ ವಲಸೆ ಹೋಗಿದ್ದರು. ಅಲ್ಲಿ ತನ್ನನ್ನು ಪೂಜಿಸಲಿಲ್ಲವೆಂದು ಇಂದ್ರನಿಗೆ ಕೋಪಬಂದು ಗುಡುಗು ಸಿಡಿಲುಗಳೊಂದಿಗೆ ಜಡಿಮಳೆ ಸುರಿಸಿದನು. ಗೋಕುಲವಿಡೀ ಹಾಹಾಕಾರದಿಂದ ತುಂಬಿತು. ಆಗ ಕೃಷ್ಣನು ಒಂದೇ ಕಿರಿಬೆರಳಿನಿಂದ ಗೋವರ್ಧನಗಿರಿಯನ್ನೆತ್ತಿ ಕೊಡೆಯಂತೆ ಹಿಡಿದು ಗೋವುಗಳನ್ನೂ, ಗೋಪ ಜನರನ್ನೂ ಕಾಪಾಡಿ ಇಂದ್ರನ ಗರ್ವವನ್ನು ಮುರಿದನು.

ವೇಣುಗೋಪಾಲನಾಗಿ ಕೃಷ್ಣನು ಹಸುಗಳ ಮಂದೆಯನ್ನು ಕಾಯ್ವನು, ಮುರಳೀ ಗಾನದಿಂದ ಗೋವುಗಳನ್ನು ಮಾತ್ರವಲ್ಲದೆ, ಗೋಪಿಕೆಯರನ್ನೂ ಪರವಶಗೊಳಿಸಿದನು. ರೂಪ ಬದಲಾಯಿಸಿಕೊಂಡು ಬಂದ ಅನೇಕ ಮಂದಿ ರಾಕ್ಷಸರನ್ನು ಹತ ಮಾಡಿದನು. ಕೆಲವರನ್ನು ಬಲರಾಮನು ಕೊಂದನು.

ಕಡೆಗೆ ಕೃಷ್ಣ ಬಲರಾಮರೇ ತನ್ನ ಪ್ರಬಲ ವೈರಿಗಳೆಂದು ಕಂಸನಿಗೆ ಗಟ್ಟಿಯಾಗಿ ತಿಳಿಯಿತು. ತನ್ನ ಕಣ್ಣೆದಿರೇ ಅವರನ್ನು ಕೊಲ್ಲಲು ನಿರ್ಧರಿಸಿ, ಕಂಸನು ತಾನು ಧನುರ್ಯಾಗ ಮಾಡುವೆನೆಂಬ ನೆವನದಲ್ಲಿ ಅವರನ್ನು ಮಥುರಾನಗರಕ್ಕೆ ಅಕ್ರೂರನ ಮೂಲಕ ಬರಮಾಡಿ ಕೊಂಡನು. ಅವರನ್ನು ಕೊಲ್ಲಲು ತಯಾರಾದವರೆಲ್ಲರೂ ಅವರಿಂದ ಹತರಾದರು.

ಕೃಷ್ಣನು ನೇರಾಗಿ ಹೋಗಿ ಸಿಂಹಾಸನದಲ್ಲಿದ್ದ ಕಂಸನನ್ನು ಜುಟ್ಟು ಹಿಡಿದು ಕೆಳಗೆಳೆದು ಮುಷ್ಟಿ ಘಾತದಿಂದ ಕೊಂದನು.

ಆಮೇಲೆ ಕೃಷ್ಣನು ದೇವಕೀ ವಸುದೇವರನ್ನೂ, ಹಿರಿಯ ರಾಜನಾದ ಉಗ್ರಸೇನನನ್ನೂ ಸೆರೆ ಮನೆಯಿಂದ ಬಿಡುಗಡೆಮಾಡಿ, ಉಗ್ರಸೇನನನ್ನು ಸಿಂಹಾಸನದ ಮೇಲೆ ಕೂಡಿಸಿದನು.



ಈ ಬಗೆಯ ಮಹಾ ಮಹಾ ಕಾರ್ಯಗಳನ್ನು ಸಾಧಿಸಿ ಕೃಷ್ಣ ಬಲರಾಮರು ಯುವಕರಾದಾಗ, ಯದುವಂಶದವರಿಗೆಲ್ಲ ಅವರು ನಾಯಕರಾದರು. ಯದುವಂಶವೂ ಪ್ರಸಿದ್ಧವಾಯಿತು.

ಜರಾಸಂಧನೇ ಕೃಷ್ಣನ ಪ್ರಬಲ ವೈರಿ. ತನ್ನ ಕುಮಾರಿಯರಾದ ಅಸ್ತೀ ಮತ್ತು ಪ್ರಾಪ್ತೀಯರನ್ನು ವಿಧವೆಯರಾಗುವಂತೆ ಮಾಡಿದ ಕೃಷ್ಣನ ಮೇಲೆ ಅವನು ತೀವ್ರ ಹಗೆ ತೊಟ್ಟಿದ್ದನು. ಅಂತೆಯೇ ಅವನು ಬಹಳ ಸಾಧನೆ ಮಾಡಿ ಇಪ್ಪತ್ತ ಮೂರು ಅಕ್ಷೋಹಿಣೀ ಸೈನ್ಯದೊಂದಿಗೆ ಬಂದು ಮಥುರೆಯನ್ನು ಮುತ್ತಿದನು.

ಅವನ ಪ್ರಯತ್ನವು ವಿಫಲವಾಯಿತು. ಕೃಷ್ಣನು ಜರಾಸಂಧನನ್ನು ಸೋಲಿಸಿ, ಜೀವದೊಂದಿಗೆ ಪಾರಾಗಿ ಹೋಗಲು ಬಿಟ್ಟನು.

ಹಗೆ ತೊಟ್ಟ ಜರಾಸಂಧನು, ವಾಮ ಮಾರ್ಗದ ಉಪಾಯವನ್ನು ಹಿಡಿದು, ಯವನ ಮ್ಲೇಚ್ಛರ ರಾಜನಾದ ರಾಕ್ಷಸ ಕಾಲಯವನನನ್ನು ಉಬ್ಬಿಸಿ ಕೆರಳಿಸಿ ಚೆನ್ನಾಗಿ ಹುರಿಗೊಳಿಸಿ, ಕೃಷ್ಣನ ಮೇಲೆ ಜಗಳಕ್ಕೆ ಕಾಲು ಕೆದರಿಸಿ ಯುದ್ಧಕ್ಕೆ ಕಳುಹಿಸಿದನು.

ಕೃಷ್ಣನು ಕಾಲಯವನನಿಗೆ ಸಿಕ್ಕದಂತೆ ಓಡುತ್ತ ಓಡುತ್ತ ಒಂದು ದೊಡ್ಡ ಗುಹೆಯೊಳಗೆ ನುಗ್ಗಿದನು. ಆ ಗುಹೆಯಲ್ಲಿ ಮುಚುಕುಂದನು ನಿದ್ದೆಯಲ್ಲಿದ್ದನು. ಕೃಷ್ಣನು ಸದ್ದಿಲ್ಲದೆ ಅವನನ್ನು ದಾಟಿ ಆಚೆಗೆ ಹೋಗಿ ಅಡಗಿದನು.

ಮುಚುಕುಂದನು ಇಕ್ಷ್ವಾಕು ರಾಜರ ಕಾಲದ ಮಾಂಧಾತನ ಕುಮಾರನು. ದೊಡ್ಡ ರಾಜನಾಗಿ ಮೆರೆದ ಮುಚುಕುಂದನು ಯುದ್ಧಗಳಲ್ಲಿ ದೇವತೆಗಳಿಗೂ ಸಹಾಯ ಮಾಡಿದವನು. ದೇವತೆಗಳು ಮೆಚ್ಚಿ ವರವನ್ನು ಕೇಳುವಂತೆ ಹೇಳಲು, ತನಗೆ ಮೋಕ್ಷಬೇಕೆಂದು ಮುಚುಕುಂದನು ಕೇಳಿದನು.

ದ್ವಾಪರ ಯುಗದಲ್ಲಿ ಕೃಷ್ಣನ ದರ್ಶನವಾದ ಮೇಲೆ ಮೋಕ್ಷ ಸಿದ್ಧಿಸುವುದೆಂದು ದೇವತೆಗಳು ಹೇಳಿದರು. ಅದುವರೆಗೆ ನಿದ್ರಿಸುವೆನೆಂದೂ, ತನ್ನ ನಿದ್ರೆಯನ್ನು ಕೆಡಿಸಿದವರು ತಾನು ನೋಡಿದ ಕೂಡಲೇ ಬೂದಿಯಾಗಿ ಹೋಗಬೇಕೆಂದೂ ಅವನು ವರ ಪಡೆದಿದ್ದನು.

ಕಾಲಯವನನು ಕೃಷ್ಣನನ್ನು ಓಡಿಸಿಕೊಂಡು ಆ ಗುಹೆಗೆ ಹೊಕ್ಕು, ಮಲಗಿದ್ದ ಮುಚುಕುಂದನನ್ನು ಕೃಷ್ಣನೆಂದುಕೊಂಡು ಒದೆದನು. ನಿದ್ರಾಭಂಗವಾದ ಮುಚುಕುಂದನು ತೀಕ್ಷ್ಣದೃಷ್ಟಿಯಿಂದ ನೋಡಿದ್ದೇ ತಡ, ಕಾಲಯವನನು ಭಗ್ಗನೆ ಉರಿದು ಬೂದಿಯಾಗಿ ಹೋದನು.

ಆಮೇಲೆ ಕೃಷ್ಣನು ಮುಚುಕುಂದನಿಗೆ ದರ್ಶನವಿತ್ತು, ಬದರಿಕಾಶ್ರಮಕ್ಕೆ ಹೋಗಿ ತಪಸ್ಸು ಮಾಡಿದರೆ ಮೋಕ್ಷ ಸಿದ್ಧಿಸುವುದೆಂದು ಹೇಳಿ, ಮುಚುಕುಂದನನ್ನು ಕಳುಹಿಸಿಕೊಟ್ಟನು.



ಶಾಪಗ್ರಸ್ತರಾದ ಜಯವಿಜಯರು, ಅವರ ಮೂರನೇ ಜನ್ಮದಲ್ಲಿ ಶಿಶುಪಾಲ, ದಂತವಕ್ತ್ರರೆಂಬ ಹೆಸರಿನಿಂದ ಕೃಷ್ಣನಿಗೆ ಶತ್ರುಗಳಾಗಿ ಜನ್ಮಿಸಿದ್ದರು. ಚೇದಿ ದೇಶಕ್ಕೆ ರಾಜನಾದ ದಮಘೋಷನಿಗೆ ಕುಮಾರನಾಗಿ ಶಿಶುಪಾಲನು ವಿಚಿತ್ರವಾಗಿ ಹುಟ್ಟಿದ್ದನು. ಹುಟ್ಟಿದ ಮಗುವಿಗೆ ನಾಲ್ಕು ಕೈಗಳೂ ಮೂರು ಕಣ್ಣುಗಳೂ ಇದ್ದುವು.

ಯಾರು ಮಗುವನ್ನು ಎತ್ತಿಕೊಂಡಾಗ ಎರಡು ಕೈಗಳೂ, ಮೂರನೇ ಕಣ್ಣೂ ಮಾಯವಾಗುವುದೋ ಅವರ ಕೈಯಲ್ಲೇ ಕೊಲ್ಲಲ್ಪಡುತ್ತಾನೆಂದು ಆಕಾಶವಾಣಿಯಾಯಿತು.

ಶಿಶುಪಾಲನ ತಾಯಿ ಸಾತ್ವತಿ ಬಂದವರ ಕೈಗೆಲ್ಲಾ ಆ ಮಗುವನ್ನು ಎತ್ತಿಕೊಳ್ಳಲು ಕೊಡುತ್ತಿದ್ದಳು. ಈ ಸಾತ್ವತಿ ಕೃಷ್ಣ ಬಲರಾಮರಿಗೆ ಅತ್ತೆಯಾಗಬೇಕು, ಸಾತ್ವತಿ ಅವರ ಕೈಗೂ ಮಗುವನ್ನು ಕೊಟ್ಟಳು. ಕೃಷ್ಣನು ಎತ್ತಿಕೊಂಡ ಕೂಡಲೇ ಮಗುವಿನ ಹೆಚ್ಚಿನ ಕೈಗಳೂ, ಕಣ್ಣೂ ಮಾಯವಾಗಿಹೋಗಿ ಸಾಧಾರಣ ಶಿಶುವಿನಂತಾಯಿತು.

ಅದನ್ನು ನೋಡಿ ಸಾತ್ವತಿ ತುಂಬಾ ಹೆದರಿದಳು, ಶಿಶುಪಾಲನು ನೂರು ತಪ್ಪು ಮಾಡಿದರೂ ಕೋಪ ತೋರಿಸದೆ ಕ್ಷಮಿಸಿಕೊಳ್ಳುವಂತೆ ಸಾತ್ವತಿ ಕೃಷ್ಣನನ್ನು ಕೇಳಿಕೊಂಡಳು. ಹಾಗೆಯೇ ಆಗಲೆಂದು ಅವಳಿಗೆ ಮಾತು ಕೊಟ್ಟನು ಕೃಷ್ಣ.

ಶಿಶುಪಾಲನು ರಾಜನಾದ ಮೇಲೆ ಜರಾಸಂಧನೊಂದಿಗೆ ಸೇರಿ, ಅಪರಾಧಗಳನ್ನೂ ಅತ್ಯಾಚಾರಗಳನ್ನೂ ನಾನಾಬಗೆಯಾಗಿ ಮಾಡುತ್ತಾ ಬಂದನು. ಅವನ ತಮ್ಮ ದಂತವಕ್ತ್ರನೂ ಅವನಿಗೆ ಜತೆಯಾಗಿದ್ದನು.

ಜರಾಸಂಧನು ಮಾತುಮಾತಿಗೂ ಮಥುರಾ ನಗರದ ಮೇಲೆ ದಾಳಿ ಮಾಡುತ್ತಿದ್ದನು. ಕೃಷ್ಣನು ಅವನನ್ನು ಪದೇಪದೇ ಸೋಲಿಸಿ ಓಡಿಸುತ್ತಲೇ ಇದ್ದನು. ಇದರಿಂದ ಭೂಮಿಯಲ್ಲಿದ್ದ ದುಷ್ಟರಾದ ಎಷ್ಟೋ ರಾಜರು ಸತ್ತರು.

ಕೃಷ್ಣನು ಸಮುದ್ರ ರಾಜನನ್ನು ಪ್ರಾರ್ಥಿಸಿ ಸ್ಥಳ ಕೇಳಿದನು. ಸಮುದ್ರದ ಮಧ್ಯದಲ್ಲಿ ವಿಶ್ವಕರ್ಮನಿಂದ ಸುರಕ್ಷಿತವಾದ ದ್ವಾರಕಾನಗರವನ್ನು ವೈಭವೋಪೇತವಾಗುವಂತೆ ನಿರ್ಮಾಣ ಮಾಡಿಸಿ, ಕೃಷ್ಣನು ತನ್ನವರೆಲ್ಲರೊಂದಿಗೆ ಹೋಗಿ ದ್ವಾರಕೆಗೆ ಸೇರಿಕೊಂಡನು.

ಜರಾಸಂಧನು ಪಟ್ಟುಬಿಡದೆ ಕೊನೆಯಸಾರಿಯಾಗಿ, ಶಿಶುಪಾಲ, ದಂತವಕ್ತ್ರ, ಪೌಂಡ್ರಕ, ಸಾಳ್ವ ಮೊದಲಾದ ತನ್ನ ಅನುಯಾಯಿಗಳಾದ ರಾಜರನ್ನೆಲ್ಲಾ ಕೂಡಿಸಿಕೊಂಡು ಹೋಗಿ ಮಥುರೆಯನ್ನು ಮುತ್ತಿಗೆ ಹಾಕಿದನು,

ಅದಕ್ಕೆ ಮೊದಲೇ ಯಾದವರನ್ನೂ, ಮಥುರೆಯ ಪ್ರಜೆಗಳನ್ನೂ ದ್ವಾರಕೆಗೆ ಸೇರಿಸಿ ಹಿಂದಿರುಗಿ ಬಂದಿದ್ದ ಕೃಷ್ಣ ಬಲರಾಮರು, ಪ್ರವರ್ಷಣಗಿರಿಯ ಶಿಖರಾಗ್ರವನ್ನು ಅಧಿರೋಹಿಸಿ ನಿಂತರು.

ಅದನ್ನು ನೋಡಿ ಜರಾಸಂಧಾದಿಗಳು ಪ್ರವರ್ಷಣ ಗಿರಿಯ ಸುತ್ತಲೂ ಬೆಂಕಿಹಚ್ಚಿ ಗಿರಿಯನ್ನು ಸುಡ ತೊಡಗಿದರು. ಅದನ್ನು ನೋಡಿ ನಗುತ್ತಾ ಕೃಷ್ಣ ಬಲರಾಮರು ಗರುಡನ ಮೇಲೇರಿ ಆಕಾಶ ಮಾರ್ಗ ದಿಂದ ಸುರಕ್ಷಿತವಾಗಿ ದ್ವಾರಕೆಯನ್ನು ಸೇರಿಕೊಂಡರು.

ಜರಾಸಂಧನೂ ಶಿಶುಪಾಲನೂ ಕೃಷ್ಣ ಬಲರಾಮರು ದಗ್ಧರಾಗಿ ಹೋದರೆಂದು ಸಂತೋಷಪಡುತ್ತ, ಹೊರಟುಹೋಗುತ್ತಿರುವಾಗ, ದ್ವಾರಕೆಯಿಂದ ಕೃಷ್ಣನು ಮೊಳಗಿಸಿದ ಪಾಂಚಜನ್ಯ ಶಂಖಧ್ವನಿಯನ್ನು ಕೇಳಿ, ಬಿಳುಪೇರಿದ ಮೋರೆಯಿಂದ ಒಬ್ಬರನ್ನೊಬ್ಬರು ನೋಡಿದರು.

ಶಿಶುಪಾಲನು ರೊಚ್ಚಿಗೆದ್ದು ಹಿಂದಿರುಗಿ ಹೋಗಿ ಮಥುರಾನಗರವನ್ನು ಪೂರ್ತಿ ಸುಟ್ಟು ಹಾಕಿದನು.

ಜರಾಸಂಧನು ದ್ವಾರಕೆಯನ್ನು ಮುತ್ತಿಗೆ ಹಾಕಲು ನೌಕೆಗಳಲ್ಲಿ ಅಸಂಖ್ಯ ಸೈನಿಕರನ್ನು ಕಳುಹಿಸಿದನು. ಸಮುದ್ರದಲ್ಲಿ ಎದ್ದ ಪ್ರಚಂಡ ಚಂಡಮಾರುತದ ಸುಳಿದಾಳಿಗಳಿಗೆ ಸಿಕ್ಕಿ ಸೈನಿಕರ ನೌಕೆಗಳೆಲ್ಲಾ ಮುಳುಗಿ ಹೋದುವು. ಜರಾಸಂಧನು ಈಚೆಗೆ ಸಮುದ್ರ ತೀರದಲ್ಲಿ ನಿಂತು ಬೆಟ್ಟದಂತಹ ತೆರೆಗಳನ್ನು ನೋಡು ತ್ತಿರುವಾಗ, "ಓ! ತಾತಾ!" ಎಂದು ಕೃಷ್ಣನು ಅವನನ್ನು ಗಟ್ಟಿಯಾಗಿ ಕೂಗಿ ಕರೆದು, ಗಲಗಲವೆಂದು ನೆಗಾಡಿದನು.

ಅದನ್ನು ಕೇಳಿ ಜರಾಸಂಧನು ಆ ಕಡೆಗೆ ತಿರುಗಿ ನೋಡಲು, ಸಮುದ್ರದಲ್ಲಿ ಒಂದು ಬಂಡೆಯ ಮೇಲೆ ನಿಂತು ನೆಗಾಡುವ ಕೃಷ್ಣನನ್ನು ನೋಡಿದನು.

"ಅಯ್ಯಾ! ಜರಾಸಂಧ ಮಹಾಶಯಾ! ಈಗ ಏನು ಮಾಡಲಿಕ್ಕೂ ನಿನ್ನಿಂದಾಗದು. ದ್ವಾರಕೆಯನ್ನು ಸೇರಲು ಸಮುದ್ರರಾಜನು ನಿನ್ನನ್ನು ಬಿಡಲಾರನು. ನಿನಗೆ ನನ್ನ ಕೈಯಲ್ಲಿ ಸಾಯುವ ಅದೃಷ್ಟವೇ ಇಲ್ಲ. ನಿನಗೆ ಸರಿಸಮನಾದ ಬಲವಂತನೊಬ್ಬನ ಕೈಯಲ್ಲೇ ಮರಣ ಬರೆದಿದೆ. ಸ್ವಲ್ಪ ಕಾಲ ಕಳೆದ ಮೇಲೆ ನಿನಗೆ ನನ್ನ ಪುನರ್ದರ್ಶನವಾಗುತ್ತದೆ. ಈಗ ಸುಮ್ಮನೆ ಹೋಗು!" ಎಂದು ಹೇಳಿದನು ಕೃಷ್ಣ.

ಅದಾದ ಮೇಲೆ ಶಿಶುಪಾಲನಿಗೆ ರುಕ್ಮಿಣಿಯೊಂದಿಗೆ ಮದುವೆ ಎಂಬ ಸಮಾಚಾರ ಕೇಳಿಸಿತು. ರುಕ್ಮಿಣಿ ವಿದರ್ಭ ರಾಜನಾದ ಭೀಷ್ಮಕನ ಮಗಳು. ಚಿಕ್ಕ ಪ್ರಾಯದಿಂದಲೇ ಅವಳು ಕೃಷ್ಣನ ಮಹಿಮೆಗಳನ್ನು ಕೇಳಿ, ಅವನೇ ತನ್ನ ನಾಯಕನೆಂದು ಮನಸಾ ಕೃಷ್ಣ ನನ್ನು ವರಿಸಿಕೊಂಡವಳು, ಆದರೆ ರುಕ್ಮಿಣಿಯ ಅಣ್ಣನಾದ ರುಕ್ಮಿ, ಕೃಷ್ಣನ ಶತ್ರುವರ್ಗದೊಂದಿಗೆ ಸೇರಿ, ತಂಗಿಯನ್ನು ಶಿಶುಪಾಲನಿಗೆ ಕೊಟ್ಟು ವಿವಾಹ ಮಾಡಬೇಕೆಂದು ಸರ್ವಸನ್ನಾಹಗಳನ್ನೂ ಮಾಡಿ ಕೊಂಡಿದ್ದನು.





# ಸುಲ್ತಾನನ ನೌಕರ

ಎಮೆನ್ ಎಂಬ ದೇಶದೊಳಗಿನ ಸಾನಾ ನಗರವನ್ನು ಪಾಲಿಸಿಕೊಂಡಿದ್ದ ಸುಲ್ತಾನ್ ಮುಬಾರಕನು ಇನ್ನೂ ಯುವಕನಾಗಿದ್ದನು. ಅವನು ತುಂಬಾ ದುಡುಕು ಬುದ್ಧಿಯವನು. ಯಾರಾದರೂ ಏನಾದರೂ ತಪ್ಪು ಮಾಡಿದರೆಂದು ಸಂದೇಹ ಬಂದರೆ ಸಾಕು, ಸತ್ಯಾಸತ್ಯತೆಯನ್ನು ವಿಚಾರಿಸಿ ತಿಳಿಯುವ ಗೋಜಿಗೆ ಹೋಗದೆ ಅವರಿಗೆ ಕಠಿಣ ಶಿಕ್ಷೆ ವಿಧಿಸಿ ಬಿಡುತ್ತಿದ್ದನು. ಆದುದರಿಂದ ಪ್ರತಿಯೊಬ್ಬರೂ ಅವನಿಗೆ ಕೋಪತಾಪಗಳೇನೂ ಬಾರದಂತೆ ಅವನ ಮುಂದೆ ಬಹಳ ಎಚ್ಚರಿಕೆಯಲ್ಲೇ ಇರುತ್ತಿದ್ದರು.

ಒಂದು ದಿನ ಸುಲ್ತಾನ್ ಮುಬಾರಕ್ ಬೇಟೆಯಾಡಲು ಕಾಡಿಗೆ ಹೋದನು. ಅವನೊಂದಿಗೆ ಕೆಲವು ಮಂದಿ ಭಟರೂ, ನೌಕರನಾದ ಸಲೀಂ ಎಂಬ ತರುಣನೂ ಹೊರಟಿದ್ದರು. ಅವರು ಬೇಟೆಯಾಡುತ್ತಿರಲು ಕಾಡಿನ ಒಂದು ಕಡೆಯಲ್ಲಿ ಮುಬಾರಕ್ ಒಂದು ಜಿಂಕೆಯನ್ನು ನೋಡಿದನು. ಕೂಡಲೇ ಸುಲ್ತಾನ್ ಅದನ್ನು ಬಾಣದಿಂದ ಹೊಡೆಯಲು ನೋಡಿದರೂ ಅದು ಹಾರಿ ಬಾಣದ ಗುರಿ ತಪ್ಪಿಸಿಕೊಂಡು ಓಡಿತು.

ಅದನ್ನು ತಡೆದು ಹಿಡಿಯುವಂತೆ ಸುಲ್ತಾನ್ ತನ್ನವರಿಗೆ ಆಜ್ಞೆ ಮಾಡಿದನು. ಅವರು ಮರಗಳ ಎಡೆಯಿಂದಾಗಿ ಅದನ್ನು ಹುಡುಕುತ್ತಾ ಹೋಗಿ, ಒಂದು ಕಡೆಯಲ್ಲಿ ಅದನ್ನು ನೋಡಿದ ಕೂಡಲೇ, ಸುಲ್ತಾನನ ಕಡೆಗೆ ಅದನ್ನು ಓಡಿಸತೊಡಗಿದರು. ಆ ಸಮಯದಲ್ಲಿ ನೌಕರನಾದ ಸಲೀಂ ಪ್ರಯೋಗಿಸಿದ ಬಾಣವು ಗುರಿತಪ್ಪಿ, ಜಿಂಕೆಯ ಕಡೆಗೆ ಓಡಿ ಬರುತ್ತಿದ್ದ ಸುಲ್ತಾನನ ಎಡದ ಕಿವಿಗೆ ತಗಲಿ, ಕಿವಿಯಲ್ಲಿ ದೊಡ್ಡದೊಂದು ರಂಧ್ರವೇರ್ಪಟ್ಟಿತು.

ಸುಲ್ತಾನ್ ಮುಬಾರಕ್ ಕೋಪದಿಂದ ಅತ್ಯುಗ್ರನಾಗಿ ತನ್ನ ನೌಕರ ಸಲೀಂನ ತಲೆಕಡಿಯುವಂತೆ ಭಟರಿಗೆ ಆಜ್ಞೆ ಮಾಡಿದನು.

ಅದನ್ನು ಕೇಳಿ ಸಲೀಂ ಸುಲ್ತಾನನ ಮುಂದೆ ಮುಂಡುಗಾಲೂರಿ, "ಮಹಾಪ್ರಭೂ! ಬೇಕೆಂದು ನಿಮಗೆ ಹಾನಿ ಮಾಡಲು ನಾನು ಪ್ರಯತ್ನ ಮಾಡಿದ್ದಲ್ಲ. ತಪ್ಪಿಸಿಕೊಳ್ಳುವ ಜಿಂಕೆಯ ಮೇಲೆ ಬಿಟ್ಟ ಬಾಣವು ಥಕ್ಕನೆ ಓಡಿಬಂದ ನಿಮಗೆ ತಗಲಿತು. ನನ್ನ ಮೇಲೆ ದಯೆ ತೋರಿಸಿಬಿಡಿರಿ. ನೀವೇನಾದರೂ ಆಪತ್ತಿನಲ್ಲಿರುವ ಸಮಯದಲ್ಲಿ ದೇವರು ತಪ್ಪದೆ

ಅರೇಬಿಯಾ ಕಥೆ



ನಿಮ್ಮನ್ನು ಕರುಣಿಸುತ್ತಾನೆ. ಏಕೆಂದರೆ, ಇದು ಪ್ರಮಾದವಶಾತ್ ಆದ ತಪ್ಪು ಪ್ರಭೂ !" ಎಂದು ಅಂಗಲಾಚಿ ಬೇಡಿದನು.

ಆ ಮಾತುಗಳಿಂದ ಸುಲ್ತಾನನಿಗೆ ಅವನ ಮೇಲೆ ಕರುಣೆ ಬಂದಿತು. ಕ್ಷಮಿಸಿ ತನ್ನ ಆಜ್ಞೆಯನ್ನು ಹಿಂದೆಗೆದುಕೊಂಡನು. ಎಲ್ಲರೂ ನಗರಕ್ಕೆ ಹಿಂದಿರುಗಿದರು. ಆಶ್ಚರ್ಯವಾದ ಸಂಗತಿ ಏನೆಂದರೆ, ಮರುದಿನದಿಂದ ಸಲೀಂ ಎಲ್ಲಿಯೂ ಕಾಣಲಿಲ್ಲ. ಭವನದೊಳಗೆ ಮಾತ್ರವಲ್ಲ, ನಗರದೊಳಗೆಲ್ಲಿಯೂ ಸಹಾ ಸಲೀಂ ಇರಲಿಲ್ಲ.

ಮುಂದೆ ಎರಡು ವರ್ಷಗಳು ಕಳೆದುವು. ಸುಲ್ತಾನ್ ಮುಬಾರಕನಿಗೆ ಸಮುದ್ರದಲ್ಲಿದ್ದ ಒಂದಾನೊಂದು ದ್ವೀಪದ ಮೇಲೆ ಅಧಿಪತ್ಯವಿದ್ದಿತು. ಅವನು ವರ್ಷಕ್ಕೆ ಒಂದು ಸಾರಿ ಆ ದ್ವೀಪಕ್ಕೆ ಹೋಗಿ ಸಂದರ್ಶನ ಮಾಡಿ ಬರುವ ಪದ್ಧತಿ ಇದ್ದಿತು. ಈ ಸಾರಿ ಅವನು ಹಡಗಿನಲ್ಲಿ ಆ ದ್ವೀಪಕ್ಕೆ ಹೋಗುವಾಗ ಅಕಸ್ಮಾತ್ ಎದ್ದ ದೊಡ್ಡ ತುಫಾನಿನಿಂದ, ಹಡಗು ನೀರಿನಡಿಯಲ್ಲಿದ್ದ ಬಂಡೆಗೆ ತಾಗಿ ಮುರಿದು ಚೂರುಚೂರಾಗಿ ಹೋಯಿತು.

ನೀರಿಗೆ ಬಿದ್ದ ಸುಲ್ತಾನನು ಒಂದು ಮರದ ತುಂಡಿನ ಆಧಾರದಲ್ಲಿ ಒಂದು ಹಗಲೂ ಒಂದು ರಾತ್ರಿಯೂ ಸಮುದ್ರದಲ್ಲಿ ಎಲ್ಲೆಲ್ಲಿಗೋ ತೇಲುತ್ತಾ ಹೋಗಿ ಹೋಗಿ, ಕಡೆಗೆ ಯಾವುದೋ ಒಂದು ದ್ವೀಪರಾಜ್ಯದ ತೀರದಲ್ಲಿ ತಳ್ಳಲ್ಪಟ್ಟನು.

ಅಲ್ಲಿ ಅವನು ಎದ್ದು ಸುತ್ತಲೂ ನೋಡಿದನು. ಜನಸಂಚಾರವೇನೂ ಕಾಣಲಿಲ್ಲ. ಸುಲ್ತಾನ್ ಕೆದರಿದ ತಲೆಯಿಂದ, ಚಿಂದಿಯಾಗಿ ಹರಿದ ದುಸ್ತುಗಳಿಂದ ಬಹಳ ದೂರದವರೆಗೆ ನಡೆದನು. ಕತ್ತಲೆಯಾಯಿತು. ಅಷ್ಟು ಹೊತ್ತಿಗೆ ಆ ರಾಜ್ಯವನ್ನು ಪಾಲಿಸುವ ರಾಜನ ಕೋಟೆಯ ಹತ್ತಿರ ಹೋದನು.

ಈ ಹೊಸರಾಜ್ಯದಲ್ಲಿ ಅವನ ಪರಿಚಯದವರಾರೂ ಇರಲಿಲ್ಲ. ಈಗ ತಾನಿರುವ ದೀನಾವಸ್ಥೆಯಲ್ಲಿ ತಾನು ಇಂತಹ ದೇಶದ ಸುಲ್ತಾನನೆಂದು ಹೇಳಿದರೆ ಕೂಡಾ ಯಾರೂ ನಂಬಲಾರರು. ಈ ಬಗೆಯ ಆಲೋಚನೆಯಿಂದ ಸುಲ್ತಾನ್ ಮುಬಾರಕ್ ಕೋಟೆಯ ಗೋಡೆಯ ಬದಿಯಲ್ಲಿದ್ದೊಂದು ಸಣ್ಣ ಕಲ್ಲು ರಾಶಿಯ ಮೇಲೆ ದಣಿವಾರಿಸಿಕೊಳ್ಳಲು ಒರಗಿಕೊಂಡನು.

ಸ್ವಲ್ಪ ಹೊತ್ತಿಗೆ ಅಲ್ಲೇ ಅವನಿಗೆ ನಿದ್ದೆ ಬಂದಿತು. ಆ ಸ್ಥಿತಿಯಲ್ಲಿ ಯಾರೋ ತನ್ನನ್ನು ಒದೆಯುವಂತೆ ತೋರಿತು, ಫಕ್ಕನೆ ಎಚ್ಚರವಾಗಿ ಎದ್ದು ಕುಳಿತು ನೋಡಿದನು.

ಇಬ್ಬರು ಭಟರು ಸ್ವಲ್ಪದೂರ ನೆಲದಲ್ಲಿರುವ ಒಂದು ಶವವನ್ನು ಅವನಿಗೆ ತೋರಿಸುತ್ತ, "ಅವನನ್ನು ಏಕೆ ಖೂನಿ ಮಾಡಿದಿ ?" ಎಂದು ಕೇಳಿದರು.

ಮುಬಾರಕ್ ಆ ಶವವನ್ನು ನೋಡಿ ಆಶ್ಚರ್ಯ ವ್ಯಕ್ತಪಡಿಸುತ್ತ, "ನಾನು ಯಾರನ್ನೂ ಕೊಲೆಗಿಲೆ

ಮಾಡಲಿಲ್ಲ. ಈ ಶವವನ್ನು ಈಗ ತಾನೇ ನೋಡು ತ್ತಿದ್ದೇನೆ, ನಾನು ಸಮುದ್ರಕ್ಕೆ ಬಿದ್ದು ಈಜಿಕೊಂಡು ಇಲ್ಲಿ ತೀರ ಸೇರಿದವನು. ನನಗೂ ಈ ಕೊಲೆಗೂ ಯಾವ ಸಂಬಂಧವೂ ಇಲ್ಲ" ಎಂದನು.

"ಅಲ್ಲಿ ಹೇಳಿಕೋ" ಎಂದು ಭಟರು ಅವನನ್ನು ಎಳೆದುಕೊಂಡು ಹೋಗಿ ತಮ್ಮ ಪ್ರಭುವಿನ ಮುಂದೆ ನಿಲ್ಲಿಸಿದರು. ಆ ರಾಜನು ಮುಬಾರಕನನ್ನು ನಾಳೆ ವಿಚಾರಿಸೋಣವೆಂದು ಹೇಳಿ ಖೈದಿನಲ್ಲಿ ಇರಿಸಲು ಆಜ್ಞೆ ಮಾಡಿದನು.

ಅಲ್ಲಿಯ ಪ್ರಭು ಒಮ್ಮೆಗೇ ತನ್ನ ತಲೆಕಡಿಯಲು ಹೇಳದಿರುವುದನ್ನು ನೋಡಿ ಮುಬಾರಕ್ ಸಂತೋಷ ಪಟ್ಟನು. ಇಂತಹುದಕ್ಕೆ ತಾನಾದರೆ ಕೂಡಲೇ ಶಿರಚ್ಛೇದ ಮಾಡಿಸುವವನೇ. ಹಾಗಿರುವಾಗ ತಾನು ಎಷ್ಟು ಮಂದಿಯ ಮರಣಕ್ಕೆ ಕಾರಣನಾದೆನೋ! ಅವರಲ್ಲಿ ನಿರಪರಾಧಿಗಳು ಎಷ್ಟು ಮಂದಿಯೋ? ಹೀಗೆ ಚಂಚಲಕ್ಕೆ ಬಿದ್ದನು ಮುಬಾರಕ್.

ಮುಬಾರಕ್ ಇದ್ದ ಕೋಣೆಗೆ ಎತ್ತರದಲ್ಲಿ ಒಂದು ಕಿಟಿಕಿ ಇದ್ದಿತು. ಕಾಗೆಯೊಂದು ಕಿಟಿಕಿಯ ಬದಿಯಲ್ಲಿ ಸೇರಿ ಕಾವುಕಾವೆಂದು ಸುಮ್ಮನೆ ಅರಚಿಕೊಂಡಿದ್ದಿತು. ಅದರ ಮೇಲೆ ಕೋಪಗೊಂಡ ಮುಬಾರಕ್ ಕೋಣೆಯಲ್ಲಿ ಸಿಕ್ಕಿದ ಒಂದು ಕಲ್ಲನ್ನು ಅದರ ಮೇಲೆ ಎಸೆದನು. ಕಾಗೆಗೆ ಆ ಕಲ್ಲು ತಾಗಲಿಲ್ಲ, ಕಲ್ಲು ರಿವ್ವನೆ ಹಾರಿ ಹೊರಗೆ ಹೋಯಿತು.

ಆಗ ಮುಬಾರಕ್ ತನ್ನಲ್ಲಿ "ಛೆ! ನನ್ನಲ್ಲಿ ಇನ್ನೂ ಆ ಹಳೆಯ ದುಡುಕು ಬುದ್ಧಿ ನಶಿಸಲಿಲ್ಲ." ಎಂದು ಕೊಂಡನು.

ಕೆಲವು ಕ್ಷಣಗಳು ಕಳೆಯುವಷ್ಟರಲ್ಲಿ ಇಬ್ಬರು ಭಟರು ಕೋಣೆಯ ಬಾಗಿಲನ್ನು ತೆರೆದು ಭರದಿಂದ ಒಳಗೆ ಬಂದು, ಮುಬಾರಕನನ್ನು ಅಮುಕಿ ಹಿಡಿದು, ತೆರೆದಿದ್ದ ಬಾಗಿಲಿನ ಮೂಲಕ ಎತ್ತಿ ಬೀಸಿ ಹೊರಗೆ ಬಿಸುಟರು.



ಅಲ್ಲಿದ್ದ ನಾಲ್ಕೈದು ಮಂದಿ ಯುವಕರ ಮುಂದೆ ಎಸೆಯಲ್ಪಟ್ಟು ಬೋರಲಬಿದ್ದನು ಮುಬಾರಕ್. ಆ ಯುವಕರಲ್ಲಿ ಆ ದೇಶದ ಯುವರಾಜನೂ ಇದ್ದನು. ಅವರು ಆ ಸ್ಥಳದಲ್ಲಿ ಏನೋ ಆಟವಾಡಿ ಕೊಂಡಿದ್ದರು. ಮುಬಾರಕ್ ಕಾಗೆಗೆ ಬಿಸುಟ ಕಲ್ಲು ಕಿಟಿಕಿಯಿಂದ ಹೋಗಿ ಯುವರಾಜನ ಎಡಗಿವಿಗೆ ತಾಗಿ ಗಾಯಮಾಡಿತ್ತು.

ಯುವರಾಜನು ಮುಬಾರಕನನ್ನು ನೋಡಿ ಹಲ್ಲು ಕಡಿಯುತ್ತ, "ಈ ಸೊಕ್ಕಿದ ನೀಚನನ್ನು ಎಳೆದು ಕೊಂಡು ಹೋಗಿ ಶಿರಚ್ಛೇದ ಮಾಡಿಬಿಡಿರಿ!" ಎಂದು ಭಟರಿಗೆ ಆಜ್ಞಾಪಿಸಿದನು.

ಭಟರು ಬಿದ್ದು ತರಚಿಕೊಂಡ ಮುಬಾರಕನನ್ನು ಎತ್ತಿ ಎಳೆದುಕೊಂಡು ಹೋಗುವಾಗ, ಯುವರಾಜನು "ನಿಲ್ಲಿರಿ!" ಎಂದು ಗಟ್ಟಿಯಾಗಿ ಕೂಗಿ ಹೇಳುತ್ತ ಚಪ್ಪಾಳೆ ತಟ್ಟಿದನು. ಭಟರು ಅಲ್ಲೇ ನಿಂತು ಬಿಟ್ಟರು. ಯುವರಾಜನು ಮುಬಾರಕನ ಸಮೀಪಕ್ಕೆ

ಬಂದು, ಅವನ ಎಡಗಿವಿಯನ್ನು ಹಿಡಿದು ಪರೀಕ್ಷಿಸಿ ನೋಡುತ್ತ, "ಈ ಕಿವಿಗೆ ಮಾತ್ರ ಇಷ್ಟು ದೊಡ್ಡ ರಂಧ್ರವು ಯಾವ ಕಾರಣದಿಂದ ಆಯಿತು ?" ಎಂದು ಕೇಳಿದನು.

ಮುಬಾರಕ್ ಯುವರಾಜನಿಗೆ ಬಾಗಿ ನಮಸ್ಕರಿಸುತ್ತ, "ಪ್ರಭೂ, ನಾನು ಕಾಗೆಯ ಮೇಲೆ ಬೀಸಿದ ಕಲ್ಲು, ಪ್ರಮಾದವಶಾತ್ ನಿಮ್ಮ ಕಿವಿಗೆ ತಾಗಿದ ಹಾಗೆಯೇ ಒಬ್ಬ ಯುವಕನು ಜಿಂಕೆಗೆ ಬಿಟ್ಟಬಾಣವು ಪ್ರಮಾದವಶದಿಂದ ನನ್ನ ಎಡಗಿವಿಗೆ ತಾಗಿತು" ಎಂದನು.

"ಹಾಗೇನು ? ಆಗ ಆ ಯುವಕನಿಗೆ ಎಂಥ ಶಿಕ್ಷೆ ಕೊಟ್ಟಿರಿ ?" ಎಂದು ಕೇಳಿದನು ಯುವರಾಜ,

"ಅವನನ್ನು ನಾನು ಶಿಕ್ಷಿಸಲಿಲ್ಲ. ಕ್ಷಮಿಸಿ ಬಿಟ್ಟು ಬಿಟ್ಟೆನು" ಎಂದನು ಮುಬಾರಕ್.

"ನೀವು ಕೂಡಾ ಆ ಯುವಕನ ಹಾಗೆ ಕ್ಷಮಿಸಲ್ಪಡಬೇಕೆಂದು ಆಶಿಸುವುದಿಲ್ಲವೇ ಸುಲ್ತಾನ್ ಮುಬಾರಕ್ ?" ಎಂದು ಕೇಳಿದನು ಯುವರಾಜ.

ಯುವಕನು ತನ್ನ ಹೆಸರು ಹೇಳಿದುದನ್ನು ಕೇಳಿ, ಮುಬಾರಕ್ ಅತ್ಯಂತ ಆಶ್ಚರ್ಯಪಡುತ್ತ, ಯುವರಾಜನನ್ನು ಪರೀಕ್ಷಿಸಿ ನೋಡಿದನು, ಅವನು ಬೇರೆ ಯಾರೂ ಅಲ್ಲ: ಕೆಲವು ವರ್ಷಗಳ ಹಿಂದೆ ತನ್ನ ಹತ್ತಿರ ನೌಕರನಾಗಿದ್ದ ಸಲೀಂ. ಆದರೆ ತನ್ನ ಹತ್ತಿರ ಕೇವಲ ಸೇವಕನಾಗಿದ್ದವನನ್ನು ಆ ಹೆಸರಿನಿಂದ ಕರೆಯಲು ಮುಬಾರಕನಿಗೆ ಥಕ್ಕನೆ ಧೈರ್ಯ ಬರಲಿಲ್ಲ.

ಯುವರಾಜನು ಮುಬಾರಕನನ್ನು ಅಪ್ಯಾಯತೆಯಿಂದ ಆಲಿಂಗಿಸಿಕೊಂಡು, "ನಿಮ್ಮ ಮುಖವನ್ನು ನೋಡುವಾಗ ನಿಮಗೆ ನನ್ನ ಗುರುತು ಹತ್ತಿತೆಂದು ಗೊತ್ತಾಯಿತು. ಅಂದು ನಿಮ್ಮ ನೌಕರನಾಗಿದ್ದ ಆ. ಸಲೀಂ ಹುಡುಗ ನಾನೇ. ಆಗ ನಾನು ನನ್ನ ತಂದೆಯೊಂದಿಗೆ ಜಗಳಮಾಡಿ ದೇಶಬಿಟ್ಟು ಓಡಿ, ನಿಮ್ಮ ಹತ್ತಿರ ನೌಕರಿಗೆ ಸೇರಿದ್ದೆನು. ಆದರೆ ನನ್ನ ತಂದೆ ನನ್ನನ್ನು ಹುಡುಕಿಸುತ್ತಾ ಇರುವುದು ಗೊತ್ತಾಯಿತು. ಅವರು ಕಳುಹಿಸಿದ ಚಾರರು ನನ್ನ ಗುರುತು ಹಿಡಿದು ನಾನು ಓಡಿಹೋದುದಕ್ಕೆ ನನ್ನ ತಂದೆ ಬಹಳ ಸಂಕಟಪಡುತ್ತಿರುವರೆಂದು ಹೇಳಿದರು. ನಾನು ನಿಧ್ಮೊಂದಿಗೆ ಹೇಳದೆ, ನನ್ನ ಈ ದೇಶಕ್ಕೆ ಹೊರಟು ಬಂದು ಬಿಟ್ಟೆನು" ಎಂದನು.

ಸುಲ್ತಾನ್ ಮುಬಾರಕನಿಗಾದ ಸಂತೋಷವನ್ನು ಹೇಳಿ ತೀರದು. ಯುವರಾಜನು ಅವನನ್ನು ತನ್ನ ತಂದೆಯ ಬಳಿಗೆ ಕರೆದುಕೊಂಡು ಹೋದನು. ಅವನು ಮುಬಾರಕನಿಗೆ ರಾಜೋಚಿತವಾದ ಮರ್ಯಾದೆಗಳನ್ನು ಮಾಡಿ, ಬೆಲೆಬಾಳುವ ಕಾಣಿಕೆಗಳನ್ನು ಕೊಟ್ಟು, ತಕ್ಕ ರಕ್ಷಣೆಯೊಂದಿಗೆ ಹಡಗಿನಲ್ಲಿ ನಾಸಾನಗರಕ್ಕೆ ಕಳುಹಿಸಿಕೊಟ್ಟನು.



# ದಿಗಿಲಿಗೆ ಕಾರಣ

**ಬ**ಡವನಾದರೂ ಬಹಳ ಉತ್ಸಾಹದಿಂದ, ಆನಂದದಿಂದ ನಗುತ್ತಾ, ಇರುವವನಾದ ರಂಗಣ್ಣ, ಇತ್ತೀಚಿಗೆ ಕೆಲವು ದಿನಗಳಿಂದ ಏನೋ ದಿಗಿಲಿನಿಂದ ಮೋರೆ ಬಾಡಿಸಿಕೊಂಡು ಕಾಣಿಸುತ್ತಿದ್ದನು.

ರಂಗಣ್ಣನಲ್ಲಿ ಇಷ್ಟು ದೊಡ್ಡ ಬದಲಾವಣೆ ಏಕೆ ಬಂದಿತೋ ಎಂಬುದನ್ನು ತಿಳಿಯಬೇಕೆಂದು, ಅವನ ಮಿತ್ರ ಸುಬ್ಬಣ್ಣ ಒಂದು ದಿನ, "ಯಾವಾಗಲೂ ಇಲ್ಲದ ಹಾಗೆ ಇಷ್ಟು ಬದಲಾಯಿಸಿಬಿಟ್ಟೆಯಲ್ಲಾ? ಏಕೆ?" ಎಂದು ಕೇಳಿದನು.

ರಂಗಣ್ಣ ಒಂದು ದೊಡ್ಡ ನೀಳುಸಿರು ಬಿಟ್ಟು, "ನಿನಗೆ ಹೇಳಬೇಕೆಂದುಕೊಂಡೇ ಮರೆತುಬಿಟ್ಟೆನು. ಸುಬ್ಬಣ್ಣಾ, ಇಷ್ಟು ಕಾಲ ಏನೂ ಇಲ್ಲದವನಾಗಿದ್ದೆನಷ್ಟೇ? ಯಾವ ದಿಗಿಲೂ ಇರಲಿಲ್ಲ. ಈ ಮಧ್ಯೆ ನನ್ನ ದೊಡ್ಡ ಮಾವ ತೀರಿಹೋದರು. ಎರಡು ಲಕ್ಷದ ಆಸ್ತಿ ಬಂದು ಸೇರಿತು. ಅವರಿಗೆ ಮಕ್ಕಳು ಮರೀ ಇಲ್ಲ. ಹತ್ತು ದಿನಗಳ ಕೆಳಗೆ ನೆರೆಯ ಗ್ರಾಮದಲ್ಲಿದ್ದ ಮುದುಕಿ ಸೋದರತ್ತೆಯೂ ತೀರಿಹೋದರು. ಅವರ ಗಂಡ ಎಂದೋ ತೀರಿದ್ದರು. ಅವರಿಗೂ ಮಕ್ಕಳು ಮರಿಗಳು ಇಲ್ಲ. ಒಂದು ಲಕ್ಷದಷ್ಟು ಆಸ್ತಿ ಪೂರಾ ನನಗೇ ದಕ್ಕಿತು" ಎಂದನು.

ಆ ಮಾತುಗಳಿಗೆ ಸುಬ್ಬಣ್ಣ ಆಶ್ಚರ್ಯಪಡುತ್ತ, "ಮತ್ತೆ ಹೀಗೆ ಆಸ್ತಿ ಕೂಡಿಬಂದುದಕ್ಕೆ ಸಂತೋಷ ಪಡಬೇಕಲ್ಲದೆ ದಿಗಿಲುಪಡುವುದೇಕೆ?" ಎಂದು ಕೇಳಿದನು.

ಆಗ ರಂಗಣ್ಣ ಉದ್ದವಾದೊಂದು ಮೂಲುಗು ದನಿ ತೆಗೆದು, "ಇನ್ನು ನನ್ನ ಬಂಧುಗಳಲ್ಲಿ ಮಕ್ಕಳು ಮರಿಗಳಿಲ್ಲದವರೂ ಅಂತ ಯಾರೂ ಇಲ್ಲ!" ಎಂದನು.



# ಫೋಟೋ ಶೀರ್ಷಿಕೆಯ ಸ್ಪರ್ಧೆ : : ಬಹುಮಾನ ರೂ. ೫೦

## ಗೆದ್ದ ಶೀರ್ಷಿಕೆಗಳು ೧೯೮೪ ಜುಲೈ ಸಂಚಿಕೆಯಲ್ಲಿ ಪ್ರಕಟವಾಗುತ್ತವೆ.



A. Lakshmana Rao



G. Srinivasa Murthy

★ ಮೇಲಿನ ಫೋಟೋಗಳಿಗೆ ಸರಿಹೊಂದುವಂತೆ ಒಂದು ವಾಕ್ಯದಲ್ಲಾಗಲೀ, ಸಂಬಂಧಿಸಿದಂತಿರುವ ಎರಡು ವಾಕ್ಯಗಳಲ್ಲಾಗಲೀ ಶೀರ್ಷಿಕೆ ಬರೆಯಬೇಕು. ★ ಮೇ ೧೦ ರೊಳಗೆ ಶೀರ್ಷಿಕೆಗಳು ನಮಗೆ ತಲಪಬೇಕು. ಆಮೇಲೆ ಬಂದ ಶೀರ್ಷಿಕೆಗಳು ಪರಿಶೀಲಿಸಲ್ಪಡುವುದಿಲ್ಲ. ★ ಶೀರ್ಷಿಕೆಗಳಲ್ಲಿ ಅತ್ಯುತ್ತಮವೆಂದು ನಾವು ನಿರ್ಧರಿಸುವ ಒಂದು ಜತೆಗೆ ರೂ. ೫೦ ಬಹುಮಾನ. ★ ಶೀರ್ಷಿಕೆಗಳನ್ನು ಪೋಸ್ಟ್ ಕಾರ್ಡಿನಲ್ಲೇ ಬರೆಯಬೇಕು. ಅದರಲ್ಲಿ ಬೇರೆ ವಿಷಯ ಬರೆಯಬಾರದು.

ವಿಳಾಸ : ಚಂದಮಾಮ ಫೋಟೋ ಶೀರ್ಷಿಕೆಯ ಸ್ಪರ್ಧೆ, ಮದರಾಸು–೬೦೦ ೦೨೬

---

## ಮಾರ್ಚಿ ಸ್ಪರ್ಧೆಯ ಫಲಿತಾಂಶ :

ಮೊದಲನೇ ಫೋಟೋ : ಅತ್ತರೆ ಅಭೀಷ್ಟಸಿದ್ಧಿ

ಎರಡನೇ ಫೋಟೋ : ಅಭಿನಯಿಸಿದರೆ ಬಹುಮಾನಸಿದ್ಧಿ

ಕಳುಹಿಸಿದವರು : ಪಿ. ಎಸ್. ರಾವ್, ಸಹೋದರ ಕಲಾವೃಂದ, ಮಂಗಳೂರು

ಬಹುಮಾನ ರೂ. ೫೦/– ಈ ತಿಂಗಳ ಆಖೈರಿನೊಳಗೆ ಕಳುಹಿಸಲಾಗುವುದು

## ನಿಮಗೆ ಗೊತ್ತೇ ? ಉತ್ತರಗಳು :

೧. ಫ್ರಾನ್ಸಿಗೆ ಸೇರಿದ ರೇನೇ ಫ್ರಾಂಕಾಯಿಸ್ ಆರ್ಮಂಡ್ ಸಲ್ಲೀಪ್ರುಧೋಮ್. ೨. ಫ್ರಾನ್ಸ್ ದೇಶಕ್ಕೆ ಸೇರಿದ ಹೆನ್ರೀಡ್ಯೂರೆಂಟ್. ೩. ಜರ್ಮನೀ ದೇಶಸ್ಥನಾದ ವಿಲ್ ಹೆಲ್ಮ್ ಕೋನ್ರಾಡ್ ರೋಂಟ್ ಜನ್. ೪. ಹಾಲೆಂಡಿಗೆ ಸೇರಿದ ಜಾಕೋಬಸ್ ಹೆಂಡ್ರಿಕಸ್ ವಾಂಟ್ ಹಾಫ್ ೫. ಜರ್ಮನಿಗೆ ಸೇರಿದ ಎಮಿಲ್‌ವಾನ್ ಬೆಹ್ರಿಂಗ್.

Printed by B. V. REDDI at Prasad Process Private Ltd., and Published by B. VISWANATHA REDDI for CHANDAMAMA CHILDREN'S TRUST FUND (Prop. of Chandamama Publications) 188, Arcot Road, Madras-600 026 (India). Controlling Editor: NAGI REDDI.




## ೧೨

[ಅಣ್ಣಂದಿರು ಹೇಳಿಕೊಂಡಂತೆ ಪಿಂಗಳನು ಹಡಗಿನ ಸರಂಗನಿಗೆ ತನ್ನ ಮನೆಯಲ್ಲಿ ತೃಪ್ತಿಯಾಗುವಂತೆ ಔತಣ ಮಾಡಿಸಿದನು. ಮೊದಲೇ ಮಾತಾಡಿಕೊಂಡಂತೆ ಸರಂಗನು ತನ್ನ ಅನುಚರರ ಸಹಾಯದಿಂದ, ಪಿಂಗಳನನ್ನು ಬಂಧಿಸಿ ತನ್ನ ಹಡಗಿಗೆ ಒಯ್ದು ಹಾಕಿದನು. ಅಣ್ಣಂದಿರಿಬ್ಬರೂ ಮನೆಗೆ ಹಿಂದಿರುಗಿ ತಾಯಿಯನ್ನು ಹೊಡೆದು ಬೈದು ಬಲವಂತದಿಂದ ಪಿಂಗಳನು ತಂದ ಧನವನ್ನೂ, ಮಹತ್ವದ ಚೀಲವನ್ನೂ ವಶಪಡಿಸಿಕೊಂಡರು.]

ಜೀವದತ್ತನೂ, ಲಕ್ಷದತ್ತನೂ ಕೂಡಿ, ಸಂತೋಷಾತುರಗಳಿಂದ, ಪಿಂಗಳನು ಮನೆಯಲ್ಲಿಟ್ಟ ಧನದ ಚೀಲವನ್ನು, ಬೇಗಬೇಗನೆ ಬಿಚ್ಚಿದರು. ಅದರೊಳಗಿದ್ದ ಬಂಗಾರವನ್ನೂ, ಬೆಲೆಯಿಲ್ಲದ ಮಣಿ ಮಾಣಿಕ್ಯಗಳನ್ನೂ, ಮುತ್ತುಗಳನ್ನೂ ನೋಡಿ ಬೆರಗಾಗಿ ಮರಗಟ್ಟಿ ಹೋದರು.

ಸ್ವಲ್ಪಹೊತ್ತಿಗೆ ಯಥಾಸ್ಥಿತಿಗೆ ಬಂದರು. ಪಿಂಗಳನು ಏನೋ ಸ್ವಲ್ಪ ಧನ ಸಂಪಾದಿಸಿಕೊಂಡು ಬಂದಿರಬೇಕೆಂದು ಅವರು ಅಂದುಕೊಂಡಿದ್ದರೆ, ಇಷ್ಟು ದೊಡ್ಡ ಮೊತ್ತವನ್ನು ತಂದು ಹಾಕಿದ್ದಾನಲ್ಲ! ಇದು ಸ್ವಪ್ನದಲ್ಲಿಯೂ ಅಂದುಕೊಳ್ಳದ ನಿಧಿ! ಅದೃಷ್ಟ ದೇವತೆಯೇ ತಮ್ಮ ಮುಂದೆ ಪ್ರತ್ಯಕ್ಷಳಾಗಿದ್ದಾಳೆ! ಇನ್ನು ತಮಗೆ ಈಡುಜೋಡಾದವರು ಪ್ರಪಂಚದಲ್ಲಿ ಯಾರೂ ಇರಲಿಕ್ಕಿಲ್ಲ.

"ಆಹಾ! ಈ ಧನದಿಂದ ನಮ್ಮ ದರಿದ್ರವಷ್ಟೇ ಅಲ್ಲ, ಹಿಂದೆ ಮುಂದೆ ಏಳು ತಲೆಮಾರಿನ ದರಿದ್ರವೂ ತೀರಿಹೋಗುತ್ತದೆ!" ಎಂದು ಜೀವದತ್ತನು ಅವುಗಳನ್ನು ಆಲಿಂಗಿಸಿಕೊಂಡನು.

"ಹೌದಣ್ಣ, ಹೌದು. ನಾವು ಇಷ್ಟು ದೊಡ್ಡ ಧನಿಕರಾದೆನೆಂದು ತಿಳಿದುಬಿಟ್ಟರೆ ಈ ಅವಂತೀ




ನಗರದ ರಾಜನೇ ತಮ್ಮ ಮಗಳಂದಿರನ್ನು ನಮಗೆ ಕೊಡುವೆನೆಂದು ಮಂತ್ರಿಗಳೊಂದಿಗೆ ಓಡಿ ಬಂದಾನು! ರಾಜನ ಅಳಿಯಂದಿರಾಗುವುದೆಂದರೆ ಸಾಮಾನ್ಯವೆ!" ಎಂದನು ಲಕ್ಷದತ್ತನು ಉತ್ಸಾಹದಿಂದ.

ಮಗಂದಿರಿಬ್ಬರೂ ಮೈ ತಿಳಿಯದೆ ಈ ವಿಧವಾಗಿ ಮಾತಾಡಿಕೊಳ್ಳುವುದು ಅಲ್ಪ ಸ್ವಲ್ಪ ತಾಯಿಯ ಕಿವಿಗೆ ಬಿದ್ದಿತು.

ಆದರಿಂದ ಅವಳಲ್ಲಿ ಮತ್ತೆ ಪುತ್ರವಾತ್ಸಲ್ಯ ಒಸರ ತೊಡಗಿ, ಅವರು ಸ್ವಲ್ಪ ಮೊದಲು ತನ್ನನ್ನು ಹೊಡೆದು ಬಡಿದು ಹಿಂಸಿಸಿದುದನ್ನೆಲ್ಲಾ ಮರೆತು, "ಹೌದೇನ್ರೋ ಕಂದಗಳಿರಾ! ಮದುವೆಯಾಗ್ತೀರಾ! ಇನ್ನು ಮೇಲಾದರೂ ಒಂದು ಕೆಲಸ ಮಾಡಿ. ಮೊದಲಿನ ಹಾಳು ಬುದ್ಧಿ ಬಿಟ್ಟು, ಹಣವನ್ನು ಕೆಟ್ಟ ಕೆಟ್ಟ ಚಾಳಿಗಳಿಗೆ ಖರ್ಚು ಮಾಡದೆ ಹೆಂಡಂದಿರನ್ನು ಚೆನ್ನಾಗಿ ನೋಡಿಕೊಂಡು ಮನೆಯವರಾಗಿ ಬದುಕಿರಪ್ಪಾ. ನನಗೆ ಬೇಕಾದ್ದು ಅದೇ. ನಾನು ನಿಮ್ಮ ನೆರಳಲ್ಲಿದ್ದು ಮೊಮ್ಮಕ್ಕಳೊಂದಿಗೆ ತಣ್ಣಗೆ ಕಾಲ ಕಳೆದೇನು ಮಕ್ಕಳೇ" ಎಂದಳು ರಾಗವಾಗಿ.

ತಾಯಿ ಹಾಗೆ ಹೇಳಿದುದನ್ನು ಕೇಳಿ ಆ ಸೋದರರಿಬ್ಬರೂ, ಹಾವುಗಳ ಹಾಗೆ ಭುಸುಗುಟ್ಟಿ, "ನಾವು ಏನು ಮಾಡಿಕೊಂಡರೆ ನಿನಗೇನು ಮುದಿಗೂಬೆ! ಮದುವೇನೇ ಮಾಡಿಕೊಳ್ತೇವೆ, ಇಲ್ಲಾ ಬೈರಾಗಿಗಳಾಗಿ ಹೋಗ್ತೇವೆ, ಅದೆಲ್ಲಾ ನಿನಗೇಕೆ? ನಿನಗೆ ನಮ್ಮ ಮೇಲೆ ಒಂದಿಷ್ಟೂ ಪುತ್ರ ಪ್ರೇಮ ಇಲ್ಲ. ಎಲ್ಲಾ ಬರೀ ವೇಷ! ನಮಗೆ ಗೊತ್ತಾಗುವುದಿಲ್ಲವೆಂದುಕೊಂಡಿದ್ದೀಯಾ? ನಿನಗೆ ಸರ್ವಸ್ವವೂ ಆ ಪಿಂಗಳ ಒಬ್ಬನೇ. ಸುಳ್ಳು ಪೊಳ್ಳು ಮಾತುಗಳಿಂದ ನಮ್ಮನ್ನು ಮೋಸಪಡಿಸಿ ಈ ನಮ್ಮ ತಂದೆಯ ಆಸ್ತಿಯಲ್ಲಿ ಪಾಲು ಪಡೆಯಬೇಕೆಂದು ನೋಡುವಿ. ನಾಳೆ ಸಾಯಲಿಕ್ಕೆ ಬಿದ್ದಿರುವವಳಿಗೆ ಇಷ್ಟೆಲ್ಲಾ ಏಕೆ? ದುರಾಶೆಯ ದುಷ್ಟ ಮುದಿಗೂಬೆ!" ಎಂದರು.

"ಅಯ್ಯಯ್ಯೋ! ಅದೆಲ್ಲಾ ನಿಮ್ಮ ಅಪ್ಪ ಗಳಿಸಿದ್ದು ಅಲ್ಲವೇ ಅಲ್ಲ. ಎಲ್ಲವೂ ಪಿಂಗಳನ ಕಷ್ಟಾರ್ಜಿತ. ಈಗ ಅದನ್ನು ಹೇಗೂ ನೀವು ಹಂಚಿಕೊಳ್ಳುತ್ತೀರಿ. ಮುದುಕಿಯಾದ ನನಗೆ ನಿಮ್ಮನ್ನು ತಡೆಯಲು ಸಾಧ್ಯವಿಲ್ಲ ನಿಜ. ನಾನು ಕೇಳುವುದೆಲ್ಲಾ ಆ ಮಹತ್ವದ ಚೀಲ ಮಾತ್ರ ನನಗೆ ಕೊಟ್ಟುಬಿಡೀ ಅಂತ! ಅದು ನನ್ನ ಹತ್ತಿರ ಇದ್ದರೆ, ನಿಮಗೆ ಏನು ಬೇಕಾದರೂ ಬೇಕಾದಾಗ ನನ್ನನ್ನು ಕೇಳಿರಿ. ಅದರೊಳಗಿಂದ ನಾನೇ ತೆಗೆದು ನಿಮಗೆ ಕೊಡುತ್ತೇನೆ. ನಾನೂ ಸಾಯುವವರೆಗೆ ಬದುಕಿಕೊಂಡಿರುತ್ತೇನೆ. ಅಷ್ಟಾದರೂ ಮಾಡಿರಪ್ಪಾ! ಅದಿದ್ದರೆ ನಾನೂ ನೀವೂ ಬೇಕಾದ ಊಟಣ ಮಾಡಿಕೊಳ್ಳಬಹುದು. ಇಲ್ಲದಿದ್ದರೆ ನಾನು ಮನೆಮನೆ ತಿರುಗಿ ಭಿಕ್ಷೆ ಎತ್ತಬೇಕು. ಅದಕ್ಕೂ ಶಕ್ತಿ ಬೇಕಲ್ಲಾ!" ಎಂದಳು ತಾಯಿ.

"ನೀನು ಮೂರು ಮಾತಿಗೂ ನಮ್ಮ ತಾಯಿಯಾಗಲಾರೆ. ಹಾಗಿರುವಾಗ ನೀನು ಭಿಕ್ಷೆ ಬೇಡಿದ

ರೇನು, ಬೀದಿಗೆ ಬಿದ್ದರೇನು ? ನೀನೇ ನಮ್ಮನ್ನು ಹೆತ್ತದ್ದು ಅಂತ ನಾವೇನು ಕಂಡಿದ್ದೇವೆಯೇ?" ಎಂದನು ಜೀವದತ್ತ ತಿರಸ್ಕಾರದಿಂದ.

"ಹೌದಣ್ಣ, ನಿನ್ನ ಮಾತು ನಿಜ. ನಮ್ಮ ಅಪ್ಪನ ಆಸ್ತಿ ಪೂರಾ ಅಡಗಿಸಿಟ್ಟು, ಎಲ್ಲವನ್ನೂ ಚಿಕ್ಕ ಮಗ ನಿಗೇ ಕೊಡಲು ನೋಡುವವಳು ನಮ್ಮ ತಾಯಿ ಹೇಗಾಗುತ್ತಾಳೆ ? ಎಲ್ಲಿಂದ ಬಂದವಳೋ ಏನೋ!" ಎಂದನು ಲಕ್ಷದತ್ತ.

ಇನ್ನು ಈ ಮಕ್ಕಳೊಡನೆ ವಾದಮಾಡಿ ಲಾಭ ವಿಲ್ಲವೆಂದು ತಾಯಿ ಪೂರ್ತಿ ನಿರಾಶಳಾಗಿ ಗೋಡೆಗೆ ಒರಗಿ ಸುಮ್ಮನೆ ಕುಸಿದು ಕುಳಿತಳು.

ಜೀವದತ್ತ ಲಕ್ಷದತ್ತರು ಕೂಡಿ ಓಂಗಳನು ತಂದ ಧನವನ್ನೆಲ್ಲಾ ಎರಡು ಭಾಗ ಮಾಡಿಕೊಂಡರು. ಆ ಕೆಲಸ ಮುಗಿದ ಮೇಲೆ ಮಹತ್ವದ ಚೀಲವನ್ನು ಕುರಿತು ಅವರೊಳಗೆ ವಾದ ಪ್ರತಿವಾದ ಶುರು ವಾಯಿತು. ಮೊದಲು ನಾನಿಟ್ಟುಕೊಳ್ಳುತ್ತೇನೆ, ತಾನಿಟ್ಟುಕೊಳ್ಳುತ್ತೇನೆ ಎಂದು ಪ್ರಾರಂಭ ವಾಯಿತು.

ತಾಯಿಯ ಬಾಯಿಯಿಂದಲೇ ಆ ಚೀಲದ ಮಹತ್ವ ಗೊತ್ತಾಗಿತ್ತು. ಅಂತಲೇ ಅಣ್ಣ ತಮ್ಮ ಇಬ್ಬರೂ ಅದು ನನಗೆ ತನಗೆ ಎಂದು ವಾದ ಮಾಡಲು ಉಪಕ್ರಮಿಸಿದರು. ಅದು ಕ್ರಮವಾಗಿ ಜೋರು ಜೋರಾಗುತ್ತ ಒಬ್ಬರ ಕುತ್ತಿಗೆ ಒಬ್ಬರು ಕಡಿಯುವ ಮಟ್ಟಕ್ಕೆ ಬಂದಿತು.

ಆಗ ತಾಯಿ ಅವರಿಬ್ಬರ ಹತ್ತಿರ ಬಂದು ಅಂಗಲಾಚುತ್ತ, "ನೀವು ಹೀಗೆ ಜಗಳಾಡಿಕೊಂಡು ಒಬ್ಬರೊಬ್ಬರಿಗೆ ಹಾನಿ ಮಾಡಬೇಡಿರಪ್ಪಾ. ನೀವು ನನ್ನನ್ನು ಎಷ್ಟೇ ಹೀನಾಯವಾಗಿ ನೋಡಿದರೂ ನೀವು ನನ್ನ ಮಕ್ಕಳೆಂಬುದನ್ನು ನಾನು ಹೇಗೆ ಮರೆತೇನು ? ಇಬ್ಬರೂ ಶಾಂತರಾಗಿ ಆ ಚೀಲ ನನ್ನ ಹತ್ತಿರ ಬಿಟ್ಟುಬಿಡಿ. ಆಗ ನಿಮ್ಮ ಜಗಳಕ್ಕೆ




ಕಾರಣವೇ ಇರುವುದಿಲ್ಲ. ನಾನು ನಿಮಗಿಬ್ಬರಿಗೂ ಇದರ ಫಲ ಕೊಡುತ್ತಾ ಇರುತ್ತೇನೆ." ಎಂದಳು.

"ನಿಲ್ಲಿಸು ನಿನ್ನ ರಾಗ!" ಎಂದು ಜೀವದತ್ತನು ತಾಯಿಗೆ ಗದರಿಸಿ, "ಈ ಚೀಲದಲ್ಲಿ ನನ್ನ ಪಾಲು ನಾನು ತೆಗೆದುಕೊಳ್ಳುವುದೇ ಸರಿ" ಎಂದು ಓಡಿ ಹೋಗಿ ಮೆಟ್ಟುಗತ್ತಿಯನ್ನು ತಂದು ಚೀಲವನ್ನು ಅಡ್ಡಕ್ಕೆ ಕೊಯ್ಯಲು ನೋಡಿದನು.

ಆಗ ತಾಯಿ ಅವನಿಗೆ ಅಡ್ಡ ಬಂದು, "ಅಯ್ಯಯ್ಯೋ! ಜೀವದತ್ತಾ! ಹಾಗೆ ಮಾತ್ರ ಮಾಡಬೇಡ. ಒಂದುಸಾರಿ ಆ ಚೀಲಕ್ಕೆ ಗಾಯ ಮಾಡಿ ಬಿಟ್ಟರೆ ಅದರ ಮಹತ್ವವೆಲ್ಲಾ ಹೋಗಿ ಬಿಡುತ್ತದೆ. ಮತ್ತೆ ಅದು ಇದ್ದರೂ ಒಂದೇ ಇಲ್ಲದಿದ್ದರೂ ಒಂದೇ. ಅದನ್ನು ಯಾರೋ ಒಬ್ಬರು ಮಾತ್ರವೇ ಇಟ್ಟುಕೊಂಡರೆ ಸುಖವಾಗಿ ಬದುಕ ಬಹುದು. ಹರಿದು ಎರಡು ಮಾಡಿದರೆ ಅದೃಷ್ಟ ಹೋದ ಹಾಗೆಯೇ!" ಎಂದಳು.



"ಹಾಗಾದರೆ ಆ ಚೀಲ ನನಗೇ ಬೇಕು!" ಎಂದು ಲಕ್ಷದತ್ತನು, ಅದನ್ನು ಎರಡು ಕೈಗಳಿಂದಲೂ ಗಟ್ಟಿಯಾಗಿ ಮುಮುಕಿ ಹಿಡಿದನು. "ಛೀ, ಭಂಡ ! ನಾನು ಈ ಮನೆಗೆ ದೊಡ್ಡವ.ಇಂತಹ ಮಹತ್ವದ ವಸ್ತುಗಳೆಲ್ಲ ಜ್ಯೇಷ್ಠ ಪುತ್ರನಿಗೆ ಸೇರಬೇಕೆಂದು ಶಾಸ್ತ್ರಗಳೂ ಪುರಾಣಗಳೂ ಘೋಷಿಸುತ್ತವೆ ಗೊತ್ತೇನೋ ? ಇನ್ನು ಉಸಿರೆತ್ತಬೇಡ! " ಎಂದನು ಜೀವದತ್ತ.

"ನಿನ್ನ ಶಾಸ್ತ್ರ ಪುರಾಣ ಮೂಲೆಗೆ ಹಾಕು. ಒಳ್ಳೇ ಮಾತಿನಲ್ಲಿ ಸುಮ್ಮನಿದ್ದೀ ಬಚಾವ್, ಇಲ್ಲದಿದ್ದರೆ..." ಎಂದು ಕೈ ಎತ್ತಿ ಅಣ್ಣನಿಗೆ ಗುದ್ದಲು ನೋಡಿದ ಲಕ್ಷದತ್ತ. ಇಬ್ಬರೂ ಒಬ್ಬರನ್ನೊಬ್ಬರು ದೂಡಾಡಿಕೊಳ್ಳ ತೊಡಗಿದರು.

ಹೀಗೆ ಮನೆಯೊಳಗೆ ಅಣ್ಣತಮ್ಮಂದಿರು ರಾತ್ರಿಯಲ್ಲಿ ಜಗಳ ಮಾಡಿಕೊಂಡಿರುವಾಗ, ಬೀದಿಗಳಲ್ಲಿ ಗಸ್ತೀ ತಿರುಗುತ್ತಿದ್ದ ಕೋತ್ವಾಲ ಭಟನೊಬ್ಬ ಅಲ್ಲಿ ನಿಂತು, ಕಿವಿಗೊಟ್ಟು ಕೇಳಿದನು. ಅವನಿಗೆ ಧನದ ಸಂಗತಿಯೂ, ಮಹತ್ವದ ಚೀಲದ ವಿಷಯವೂ ಗೊತ್ತಾಯಿತು. ಎಲ್ಲಾ ಕೇಳಿ ಇದು ಬಹು ದೊಡ್ಡ ವಿಷಯವೆಂದುಕೊಂಡು, ಬೆಳಗಾಗುವಷ್ಟರಲ್ಲಿ ಅವನು ಮಹಾ ರಾಜನ ಬಳಿಗೆ ಹೋಗಿ, ತಾನು ಕೇಳಿದ ಹೊಸ ಬಗೆಯ ಸಂಗತಿಯನ್ನೆಲ್ಲಾ ನಿವೇದಿಸಿಕೊಂಡನು.

ಮೊದಲೇ ಅವಂತೀ ನಗರದ ರಾಜನು ಪರಮ ಲೋಭಿಯಾಗಿದ್ದನು. ಅಂಥವನು ಈ ರಹಸ್ಯವನ್ನು ಕೇಳಿದ ಕೂಡಲೇ, ಅವನಲ್ಲಿ ಕೆಟ್ಟ ದುರಾಶೆಯ ತುರಿಕೆ ಪ್ರಾರಂಭವಾಯಿತು. ಕೂಡಲೇ ಅವನು ದಂಡನಾಯಕನನ್ನು ಕರೆಯಿಸಿ, ಆ ಅಣ್ಣತಮ್ಮಂದಿರನ್ನೂ, ಅ ಮನೆಯೊಳಗಿರುವ ಎಲ್ಲಾ ವಸ್ತುಗಳನ್ನೂ ಒಂದು ಕೂಡಾ ಬಿಡದೆ ಹುಡುಕಿ ಹಿಡಿದು ತರಬೇಕೆಂದು ಆಜ್ಞೆ ಮಾಡಿದನು.

ದಂಡನಾಯಕನು ಭಟರನ್ನು ಕರೆದುಕೊಂಡು ಬಂದು ಜೀವದತ್ತನನ್ನೂ ಲಕ್ಷದತ್ತನನ್ನೂ ಸೆರೆ ಹಿಡಿದನು. ತರುವಾಯ ಮನೆಯೊಳಗೆಲ್ಲಾ ಜಾಡಿಸಿ ಗಾಳಿಸಿ, ಧನವನ್ನೂ, ಪಾತ್ರ ಪರಡಿಗಳನ್ನೂ, ಮಹತ್ವದ ಚೀಲವನ್ನೂ ವಶಪಡಿಸಿ ಬಂಡಿಗಳಲ್ಲಿ ಹಾಕಿಸಿ ರಾಜಾಸ್ಥಾನಕ್ಕೆ ತಂದು ಹಾಕಿದನು. ಹೇರಳ ಧನವು ಸಿಕ್ಕಿದುದನ್ನು ನೋಡಿ ರಾಜನ ಕಣ್ಣುಗಳು ಗಿರಿಗಿರಿ ತಿರುಗಿದುವು. ತಾನು ನೋಡುವುದೆಲ್ಲಾ ಕನಸೇನೋ ಅಂದುಕೊಂಡು ಕಣ್ಣುಗಳನ್ನು ಸಾಧ್ಯವಾದಷ್ಟು ತೆರೆದು ನೋಡಿದನು.

ಜೀವದತ್ತ ಲಕ್ಷದತ್ತರೊಡನೆ ವಿಚಾರಿಸಿದಾಗ ಅವರು ನಡೆದ ಸಂಗತಿ ಹೇಳಲು ನಿರಾಕರಿಸಿದರು. ರಾಜನು ಭಟರಿಂದ ನಾಲ್ಕಾರು ಕೊರಡೆಗಳ ಬಿಸಿ ಏರಿಸಿದ ಕೂಡಲೇ, ಇಬ್ಬರೂ ಅಳುತ್ತಾ ಮೊದಲಿನಿಂದಲೇ ನಡೆದ ಕಥೆಯನ್ನೆಲ್ಲಾ ರಾಜನ ಮುಂದೆ ನಿವೇದನೆ ಮಾಡಿದರು.

"ಓಹೋ ! ಹಾಗಾದರೆ ಈ ಸೊತ್ತು ಯಾವತ್ತೂ ನಿಮ್ಮದು ಅಲ್ಲವೆಂದು ಆಯಿತು !" ಎಂದು ರಾಜನು

ಸಂತೋಷದಿಂದ ನಕ್ಕು, "ರಾಜ್ಯದಲ್ಲಿ ಹಕ್ಕುದಾರರಾರೂ ಇಲ್ಲದಿರುವ ಸ್ಥಿರಚರ ಸೊತ್ತುಗಳೆಲ್ಲಾ ನ್ಯಾಯಶಾಸ್ತ್ರ ರೀತಿಯಂತೆ ರಾಜನಿಗೇ ಸೇರುತ್ತವೆ. ನೀವು ನಿಮ್ಮ ತಮ್ಮನೆಂದು ಹೇಳುವ ಪೀಂಗಳನನ್ನು ಗುಲಾಮನಾಗಿ ಮಾರಿಯೂ ಆಯಿತು. ಆದುದರಿಂದ ಅವನಿಗೆ ಇನ್ನು ಈ ಸೊತ್ತುಗಳಲ್ಲಿಯೂ, ಪೌರ ಹಕ್ಕಿನಲ್ಲಿಯೂ ಯಾವುದೊಂದು ಹಕ್ಕೂ ಇಲ್ಲ. ಇನ್ನು ನಿಮ್ಮಿಬ್ಬರ ಸಂಗತಿ. ನೀವು ನಿಮ್ಮದಲ್ಲದ ಆಸ್ತಿಯನ್ನು ರಹಸ್ಯವಾಗಿ ಹಂಚಿಕೊಳ್ಳುವುದರಲ್ಲಿ ತಗಾದೆ ನಡೆಸಿಕೊಂಡಿದ್ದೀರಿ. ಅದಕ್ಕಾಗಿ ನಿಮಗೆ ಇಪ್ಪತ್ತು ವರುಷ ಕಾರಾಗಾರ ಶಿಕ್ಷೆ ವಿಧಿಸುತ್ತೇನೆ" ಎಂದನು.

"ಮಹಾಪ್ರಭುಗಳೇ! ನಮ್ಮನ್ನು ದಯಮಾಡಿ ಬಿಟ್ಟುಬಿಡಿರಿ! ಆ ಧನವಾಗಲೀ, ಮಹತ್ವದ ಚೀಲವಾಗಲೀ ನಮಗೆ ಬೇಡ. ಸ್ವೇಚ್ಛೆಯಾಗಿ ಬದುಕಿಕೊಂಡಿರಲು ಅಪ್ಪಣೆ ಕೊಡಿರಿ. ಕಾಡಿಗೆ ಹೋಗಿಯಾದರೂ ಬದುಕಿಕೊಂಡಿರುತ್ತೇವೆ." ಎಂದು ಜೀವದತ್ತ, ಲಕ್ಷದತ್ತರು ಬೇಡಿಕೊಂಡರು.

ಆದರೆ ಅವರನ್ನು ಸ್ವೇಚ್ಛೆಯಾಗಿ ಬಿಡಲು ರಾಜನಿಗೆ ಇಷ್ಟವಿರಲಿಲ್ಲ. ಅಷ್ಟೆಲ್ಲಾ ಮಾಡಿದವರು ಸ್ವತಂತ್ರರಾಗಿದ್ದರೆ ಇನ್ನೆಷ್ಟೆಲ್ಲ ಮಾಡುವರೋ, ಯಾವ ಭೂತ ಮಂತ್ರಗಾರ ಸ್ನೇಹಿತನಿಂದ ತನಗೇನು ಘಾತ ಮಾಡಿಸುವರೋ ಎಂದು ಅಂತರಂಗದಲ್ಲಿ ಶಂಕಿಸಿದನು. ಅಥವಾ ಜನರ ನಡುವೆ ಇವರು ರಾಜನು ತಮ್ಮ ಸೊತ್ತನ್ನೆಲ್ಲಾ ಅಪಹರಿಸಿದನೆಂದು ಗೋಳಿಟ್ಟರೂ ಕಷ್ಟವೇ. ಆಗ ಪ್ರಜೆಗಳಲ್ಲಿ ಕೆಲವರಿಗಾದರೂ ರಾಜನ ಮೇಲೆ ದುರಭಿಪ್ರಾಯ ಉಂಟಾಗುವ ಸಂಭವವಿದೆ. ಅದು ಕ್ರಮೇಣ ಬಂಡಾಯಕ್ಕೂ ತಿರುಗೀತು!

"ಎಲೈ ದುಷ್ಟ ಸಹೋದರರೇ! ನಿಮ್ಮಷ್ಟಕೆ ನೀವೇ ಮಾಡಿದ ತಪ್ಪುಗಳನ್ನು ಒಪ್ಪಿಕೊಂಡದ್ದಷ್ಟೇ ಅಲ್ಲದೆ, ಹಡೆದ ತಾಯಿಯನ್ನು ಹಿಂಸಿಸಿರುವುದನ್ನೂ ಹೇಳಿಕೊಂಡಿದ್ದೀರಿ. ಆದ್ದರಿಂದ ನಿಮಗೆ ಕಾರಾಗಾರದ ಶಿಕ್ಷೆ ತಪ್ಪಲಾರದು. ಇನ್ನು ನಿಮ್ಮ ತಾಯಿಗೆ ಜೀವಿತಾಂತದವರೆಗೂ ಬದುಕಲು ತಿಂಗಳಿಗೆ ಹತ್ತು ಮೊಹರಿಗಳನ್ನು ಅಶನಾರ್ಥವಾಗಿ ಕೊಡಿಸುತ್ತೇನೆ. ಆಕೆಗೆ ಅದು ಯಥೇಷ್ಟವಾಯಿತು!" ಎಂದು ತೀರ್ಪು ಹೇಳಿ ರಾಜನು ಉದ್ಯಾನದ ಕಡೆಗೆ ಹೊರಟು ಹೋದನು.



ರಾಜಭಟರು ಜೀವದತ್ತ, ಲಕ್ಷದತ್ತರ ಕಾಲುಗಳಿಗೆ ಸಂಕಲೆ ಹಾಕಿ, ಅದಕ್ಕೆ ದೊಡ್ಡ ಕಬ್ಬಿಣದ ಗುಂಡುಗಳನ್ನು ತಗಲಿಸಿ, ಎಳೆದುಕೊಂಡು ಹೋಗಿ, ಕಗ್ಗಾನು ಗತ್ತಲೆಯ ಜಾಗದಲ್ಲಿದ್ದ ಒಂದು ಕೋಣೆಯೊಳಗೆ ದೂಡಿ, ಬಾಗಿಲು ಹಾಕಿ ತಾಳಭದ್ರ ಮಾಡಿ ಹೋದರು.

ಅಣ್ಣ ತಮ್ಮಂದಿರಿಬ್ಬರೂ ತಮಗೆ ಬಂದ ದುರ್ಗತಿಗಾಗಿ ಮಲಮಲ ಮರುಗಿದರು, ಆ ನಿಮಿಷದಲ್ಲಿ ಅವರಿಗೆ ತಮ್ಮನಿಗೂ, ತಾಯಿಗೂ ಭಾರಿ ದ್ರೋಹ

ಮಾಡಿದೆವೆಂದು ಪಶ್ಚಾತ್ತಾಪವಾಯಿತು. ಆದರೆ ಎಲ್ಲಾ ಮೀರಿಹೋದ ಮೇಲೆ ಈಗ ಏನೂ ಮಾಡಲಾಗದ ಸ್ಥಿತಿಗೆ ಬಿದ್ದಾಗಿತ್ತು. ಕತ್ತಲೆಯೂ. ದುರ್ಗಂಧವೂ, ಒದ್ದೆಯಾದ ನೆಲವೂ, ನೀರಿಳಿಯುವ ಗೋಡೆಗಳೂ....ಯಾವುದೋ ನರಕಕೂಪವಾಗಿತ್ತು ಅದು. ಬಹಳ ಹೊತ್ತು ಅಳುತ್ತಾ ಇದ್ದು ಬವಳಿ ಬಂದು ನಿದ್ದೆಗೆ ಬಿದ್ದರು.

ಅಣ್ಣಂದಿರಿಬ್ಬರೂ ಕೂಡಿ ಮಾಡಿದ ದ್ರೋಹದ ಫಲಿತವಾಗಿ ಪಿಂಗಳನು ಹಡಗಿನ ಸರಂಗನಿಗೆ ಗುಲಾಮನಾಗಿ ಸಿಕ್ಕಿಬಿದ್ದನಲ್ಲವೆ ? ಆ ಸರಂಗ ಶೂರನು ಪಿಂಗಳನನ್ನು ತನ್ನ ಹಡಗಿನ ಉಳಿದ ಗುಲಾಮರ ಜತೆಯಲ್ಲಿ ಚುಕ್ಕಾಣಿ ತಿರುಗಿಸುವ ಸ್ಥಳದಲ್ಲಿದ್ದ ಕಬ್ಬಿಣದ ದಿಮ್ಮಿಗಂಬಕ್ಕೆ ಸಂಕಲೆಗಳಿಂದ ಬಂಧಿಸಿ ಇರಿಸಿದನು. ಬೆಳಗಾದ ಕೂಡಲೇ ಹಡಗು ಲಂಗರೆತ್ತಿ ಹೊರಟಿತು. ಸರಂಗನ ಆಜ್ಞೆಯಾದ ಕೂಡಲೇ ಗುಲಾಮರು ಹುಟ್ಟು ಗೋಲುಗಳನ್ನು ಕದಲಿಸಿ ತೊಳಸುತ್ತ ಹಡಗನ್ನು ಸಮುದ್ರದಲ್ಲಿ ಸಾಗಿಸತೊಡಗಿದರು.

ಈ ಸರಂಗನು ಮೇಲು ನೋಟಕ್ಕೆ ದೊಡ್ಡ ಮನುಷ್ಯನ ಹಾಗೆ ಕಂಡರೂ ನಿಜಕ್ಕೂ ಅವನೊಬ್ಬ ದೊಡ್ಡ ಸಮುದ್ರ ಚೋರ. ರೇವಿನಿಂದ ಮತ್ತೊಂದು ರೇವಿಗೆ ಪ್ರಯಾಣ ಮಾಡುವ ಹಡಗಿನಂತೆ ಸಾಗುತ್ತ, ಯಾವ ರೇವಿನಲ್ಲಿ ಎಂತಹ ಸರಕುಗಳನ್ನು ಹಡಗುಗಳಿಗೆ ಏರಿಸಲಾಗುವುದೆಂದು ಕಂಡುಹಿಡಿದು, ಆ ಹಡಗನ್ನು ಮಹಾ ಸಮುದ್ರದಲ್ಲಿ ಅಟಕಾಯಿಸಿ ಪೂರ್ತಿ ದೋಚಿಕೊಳ್ಳುವನು. ಹಾಗೆ ದೋಚಿಕೊಂಡ ಹಡಗಿನಲ್ಲಿದ್ದವರನ್ನೆಲ್ಲಾ ಬಹು ಕ್ರೂರವಾಗಿ ಸಮುದ್ರದ ಪಾಲು ಮಾಡಿಬಿಡುವನು.

ಒಂದು ವೇಳೆ ಯಾರನ್ನಾದರೂ ಜೀವದೊಂದಿಗೆ ಉಳಿಯಲು ಬಿಟ್ಟರೆ, ಅವರು ತನ್ನ ನಿಜ ಸ್ವರೂಪವನ್ನು ಹತ್ತುಮಂದಿಗೆ ಹೇಳಿಬಿಡುವರೆಂದು ಅವನಿಗೆ ಭಯ. ಅಂತಲೇ ರಾಕ್ಷಸರು ಅವನ ಮುಂದೆ ನಾಚಬೇಕು.

ಗುಲಾಮರೊಂದಿಗೆ ಚುಕ್ಕಾಣಿ ದಿಮ್ಮಿಗಂಬಕ್ಕೆ ಕಟ್ಟಲ್ಪಟ್ಟಿದ್ದ ಪಿಂಗಳನು ಮರೆತುಹೋದ ಭಲ್ಲೂಕ



ಕೇತು ಮಂತ್ರವನ್ನು ಎಷ್ಟು ತಲೆ ಕೆರೆದುಕೊಂಡರೂ ನೆನಪಿಗೆ ತರಲಾಗಲಿಲ್ಲ. ಅದು ಮರೆತು ಹೋದುದಕ್ಕೆ ಬಹಳವಾಗಿ ಪೇಚಾಡಿಕೊಂಡನು. ಅಣ್ಣಂದಿರು ತನ್ನ ಸೊತ್ತನ್ನು ವಶಪಡಿಸಿಕೊಳ್ಳಲಿಕ್ಕಾಗಿ ಇಷ್ಟು ದೊಡ್ಡ ಕುಟಿಲ ತಂತ್ರದಿಂದ ತನ್ನನ್ನು ಹಡಗಿನ ಸರಂಗನಿಗೆ ಗುಲಾಮನಾಗುವಂತೆ ಮಾರಿದುದನ್ನು ನೆನೆದು ಪಿಂಗಳನು ಮಹಾ ಕೋಪದಿಂದ ಕುದಿಯ ತೊಡಗಿದನು. ಈಗ ಅವರಿಗೆ ತನ್ನ ತಡೆ ತೊಲಗಿ ಹೋದುದರಿಂದ, ತಾಯಿಯನ್ನು ನಾನಾ ಹಿಂಸೆಗೆ ಗುರಿಪಡಿಸುವರೆಂದೂ, ತಾನು ಸಂಪಾದಿಸಿಟ್ಟ ಧನ ವನ್ನೆಲ್ಲಾ ಬೇಡದ ಖರ್ಚುಗಳಿಗೆ ವಿನಿಯೋಗಿಸಿ ಹಾಳು ಮಾಡುವರೆಂದೂ ಅವನಿಗೆ ತಿಳಿದು ಒಳಗೊಳಗೇ ತಳಮಳಿಸಿದನು.

ಈ ಗುಲಾಮತನದಿಂದ ತಾನು ಹೊರಬೀಳು ವುದು ಹೇಗೆ? ಇದೇ ಆಲೋಚನೆಯಾಯಿತು ಪಿಂಗಳನಿಗೆ, ಹೀಗಿರುವಾಗ, ಅವನು ಸ್ವಲ್ಪವೂ ಊಹಿ ಸಿರದಂತೆ, ದೈವಸಂಕಲ್ಪವೋ ಎಂಬ ಹಾಗೆ ಒಂದಾ ನೊಂದು ದಿನ ಸಮುದ್ರದ ಮೇಲೆ ಭಾರಿ ತುಫಾನು ಪ್ರಾರಂಭವಾಯಿತು. ಸಮುದ್ರದಲ್ಲಿ ಗುಡ್ಡದಷ್ಟೆತ್ತ ರಕ್ಕೆ ಎದ್ದ ಅಲೆಗಳಿಂದ, ಬಿರುಗಾಳಿಯ ಹೊಡೆತ ಗಳಿಂದ ಹಡಗು ಸುಳಿಗಾಳಿಗೆ ಸಿಕ್ಕಿದ ತರಗೆಲೆ ಯಾಯಿತು. ಸರಂಗನು ಅಪಾಯವನ್ನು ಗುರುತಿಸಿ ತನ್ನ ಅನುಚರರಿಗೂ, ಗುಲಾಮರಿಗೂ ಎಚ್ಚರಿಕೆಯ ಕೂಗು ಹಾಕುತ್ತ ಓಡಾಡತೊಡಗಿದನು. ಬಡಬಡನೆ ಆಜ್ಞೆಗಳನ್ನು ಮಾಡತೊಡಗಿದನು.

ಅದೇ ಸಮಯಕ್ಕೆ ಅವನ ಪಾಲಿಗೆ ಮೃತ್ಯು ಕಳುಹಿಸಿತೋ ಎಂಬ ಹಾಗೆ, ದೂರದಲ್ಲಿ ಮತ್ತೊಂದು ಹಡಗು ತುಫಾನಿಗೆ ಸಿಕ್ಕಿ ಸಮುದ್ರದ ಅಲೆಗಳ ಮೇಲೆ ಅತ್ತಿತ್ತ ಹೊರಳಾಡುವ ದೃಶ್ಯ ಕಂಡಿತು.

ಸರಂಗನು ತನ್ನ ಹತ್ತಿರವಿದ್ದ ದುರ್ಬೀನಿಯ ಮೂಲಕ ಆ ಹಡಗನ್ನು ಪರೀಕ್ಷಿಸಿ ನೋಡಿದನು. ಅದು ಬಹು ದೊಡ್ಡ ಹಡಗು. ಖಂಡಾಂತರ ವ್ಯಾಪಾರಗಳಿಗಾಗಿ ದೊಡ್ಡ ದೊಡ್ಡ ವರ್ತಕರು ಉಪಯೋಗಿಸುವ ಗುಂಪಿಗೆ ಸೇರಿದುದು. ಅಂತಹ



ಹಡಗಿನಲ್ಲಿ ಬೆಲೆ ಇಲ್ಲದಷ್ಟು ವ್ಯಾಪಾರದ ಸರಕು ಗಳು ಇರುತ್ತವೆಂದು ಸರಂಗನಿಗೆ ಗೊತ್ತಿತ್ತು.

ಸಮುದ್ರ ಮಧ್ಯದಲ್ಲಿ ಎರಡು ಹಡಗುಗಳು ತುಫಾನಿಗೆ ಸಿಕ್ಕಿ ಅಪಾಯದಲ್ಲಿವೆ. ಇಂತಹ ಸಮಯ ದಲ್ಲಿ ತಾನು ಸ್ವಲ್ಪ ಸಾಹಸ ಮಾಡಿಬಿಟ್ಟರೆ, ಆ ಹಡಗಿನಲ್ಲಿರುವ ಅಮೂಲ್ಯವಾದ ವ್ಯಾಪಾರದ ವಸ್ತು ಗಳೆಲ್ಲಾ ತನ್ನದಾಗಿಬಿಡುತ್ತವೆಂದು ಆ ಕಳ್ಳ ಸರಂಗನಿಗೆ ತೋರಿತು. ತನ್ನ ಅನುಚರರು ಕೂಡಾ ಇಂತಹ ಇಕ್ಕಟ್ಟಿನ ಕೆಲಸದಲ್ಲಿ ಸಾಹಸ ಉಳ್ಳವರೇ, ಚೆನ್ನಾಗಿ ನುರಿತವರೇ, ಆ ಹಡಗಿನಲ್ಲಿರುವವರು ಕೂಡಾ ನಾವಿಕ ಪರಿಜ್ಞಾನವುಳ್ಳವರೇ ಹೊರತು ಸಮುದ್ರ ಯುದ್ಧಕ್ಕೆ ಅಭ್ಯಾಸ ಇದ್ದವರಾಗಿ ಇರಲಿಕ್ಕಿಲ್ಲ.

ಸರಂಗನು ಈ ವಿಧವಾಗಿ ಆಲೋಚನೆಮಾಡಿ, ತನ್ನ ಅನುಚರರಿಗೆ ಎಚ್ಚರಿಕೆ ಕೊಟ್ಟನು. ಅಂತಹ ತುಫಾನಿನಲ್ಲಿಯೂ ಅವನ ಅನುಚರರು, ಕತ್ತಿಗಳನ್ನೂ. ಬಿಲ್ಲಂಬುಗಳನ್ನೂ ಧರಿಸಿ ಆ ವರ್ತಕ ಹಡಗನ್ನು ವಶಪಡಿಸಿಕೊಳ್ಳಲು ಸನ್ನದ್ಧರಾದರು.

ಕಾಲುಗಳನ್ನು ಬಂಧಿಸಲ್ಪಟ್ಟ ಪಿಂಗಳನು ಉಳಿದ ಗುಲಾಮರೊಂದಿಗೆ ತಾನೂ ಸೇರಿ ಹುಟ್ಟುಗೋಲನ್ನು ಆಡಿಸಬೇಕಾಗಿ ಬಂದಿತ್ತು. ಕ್ರಮವಾಗಿ ಹಡಗು ಆ ವರ್ತಕ ಹಡಗನ್ನು ಸಮೀಪಿಸಿತು. ಸರಂಗನು ತನ್ನ ಮುಖ್ಯ ಅನುಚರರೊಂದಿಗೆ ದುರ್ಬೀನಿನಲ್ಲಿ ನೋಡುತ್ತ ಕುಳಿತಿದ್ದನು. ಇದ್ದಕ್ಕಿದ್ದ ಹಾಗೆ ಅವನು ಭಯಕಂಪಿತ ನಾಗಿ ಕೆಟ್ಟ ಸ್ವರದಿಂದ ಕಿರಿಚುತ್ತಾ ಕೂಗಿದನು :

" ಎಲ್ಲರೂ ಬಾಣ ಬಿಡಿರೋ ! ಬಾಣಬಿಡೀ ! ಬಿಲ್ಲಂಬು ಬಿಡುತ್ತಾ ಹಡಗನ್ನು ಹಿಂದೆ ತಿರುಗಿಸಿರೋ ! ಬೇಗ ಹಿಂದೆ ಓಡಬೇಕು. ಅದು ವರ್ತಕರ ಹಡಗಿನ ಹಾಗಿಲ್ಲಾ ! ಅವರು ಉರಿಯುವ ಬಟ್ಟೆಯನ್ನು ಬಾಣಕ್ಕೆ ಸುತ್ತಿ ನಮ್ಮ ಹಡಗಿನ ಮೇಲೆ ಬಿಡಲಿದ್ದಾರೆ. ಓಡಿಸಿರಿ ಹಿಂದೇ !"

ಸರಂಗನ ಕೂಗು ನಿಲ್ಲುವುದಕ್ಕೆ ಮೊದಲೇ ಆ ಕಡೆಯ ಹಡಗಿನಿಂದ ಉರಿಯುತ್ತಿರುವ ಬಾಣಗಳು ಆಕಾಶ ಬಾಣದಂತೆ ಹಾರಿ ಬಂದು ಪಿಂಗಳನಿರುವ ಹಡಗಿನ ಮೇಲೆ ಬೀಳತೊಡಗಿದವು.

ಅದನ್ನು ನೋಡಿದ ಕೂಡಲೇ ಎಲ್ಲರಿಗೂ ದೊಡ್ಡ ಅಕಸ್ಮಾತ್ ಭೀತಿಯುಂಟಾಯಿತು.

ಅವುಗಳಲ್ಲಿ ಕಲವು ತೆರೆಗಂಬಕ್ಕೆ ಒರಗಿ ನಿಂತಿದ್ದ ಸರಂಗನ ಅನುಚರರ ಮೇಲೆ ಬಿದ್ದು, ಅವರ ದುಸ್ತು ಗಳಿಗೆ ಬೆಂಕಿ ಹಿಡಿಯಿತು.

ಕೂಡಲೇ ಸರಂಗನು ಹುಚ್ಚನ ಹಾಗೆ ಕಿರಿಚುತ್ತ, " ಗುಲಾಮರನ್ನೆಲ್ಲಾ ಬಿಟ್ಟುಬಿಡಿರೋ ! ಈಗ ನಾವೆಲ್ಲಾ ಒಂದೇ! ಅವರು ಕತ್ತಿಗಳನ್ನು ಹಿಡಿದು ಹಡಗನ್ನು ರಕ್ಷಿಸುವ ಸಮಯ ಬಂತು !" ಎಂದು ಕೂಗಿ ಕೂಗಿ ಹೇಳಿದನು. —(ಇನ್ನೂ ಇದೆ)

